ಗ್ರಂಥಮಾಲೆ ಸಂಪುಟ : ಆರು

# ಅಣವೀರಪ್ಪನ ಸ್ವರವಚನಗಳು

ಸಂಪಾದಕರು

ಡಾ. ಎಸ್.ಎಂ. ಹಿರೇಮಠ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ

ಜೆ.ಎಸ್.ಎಸ್. ಮಹಾವಿದ್ಯಾಪೀಠ, ಮೈಸೂರು

Swaravachan Samputa-6, Anaveerappana Swaravachanagalu: Songs of Anaveerapp: Edited by Dr. S.M. Hiremath Lect. in Kannada Gulbarga University, Gulburga. Published by J.S.S. Granthamale, Mysore - 570 004, First Edition 1997. pp. xviii+52; Rs. 30-00

ಮೊದಲನೆಯ ಮುದ್ರಣ: ೧೯೯೭



ಬೆಲೆ: ರೂ. ೩೦-೦೦



ಅಕ್ಷರ ಜೋಡಣೆ : ಅಖಿಲ ಗ್ರಾಫಿಕ್ಸ್
ಜಯನಗರ,
ಧಾರವಾಡ - ೫೮೦ ೦೦೧

ಬೆನಕ ಇಂಪ್ರೆಷನ್ಸ್
ಮುದ್ರಕರು : 4ನೇ ಅಡ್ಡರಸ್ತೆ, ಎಂ.ಜಿ. ರಸ್ತೆ,
ತುಮಕೂರು. ಫೋನ್: 0816-72439

# ಶುಭ ಹಾರೈಕೆ

ವೀರಶೈವ ಧಾರ್ಮಿಕಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ-ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ "ಸ್ವರವಚನಸಾಹಿತ್ಯ"ದ ಸಂಶೋಧನೆ-ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ. ಡಾ. ಫ.ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದುತಾಗುತ್ತದೆ. ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣುಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೇ ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸಗೀತಾಂಜಲಿ'ಯನ್ನು ಜೆ.ಎಸ್.ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ, ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ, ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯು ಪ್ರಕಟಿಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಡೀಕರಿಸಿ, ವ್ಯವಸ್ಥಿತವಾಗಿ ವರ್ಗೀಕರಿಸಿ, ಅದನ್ನು "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ" ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲಶ್ರೇಯಸ್ಸನ್ನು ಹಾರೈಸುತ್ತೇವೆ.

ಜನವರಿ ೧೩, ೧೯೯೭ — ಶ್ರೀ ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳು

# ಪ್ರಸ್ತಾವನೆ

ಕಲ್ಯಾಣ ಕರ್ನಾಟಕ ಪ್ರದೇಶವು ವಚನ ವಾಙ್ಮಯದ ತವನಿಧಿಯಾಗಿರುವಂತೆ, ಸ್ವರವಚನಗಳ ಭಂಡಾರವೂ ಆಗಿದೆ. ಈ ಪ್ರದೇಶದಲ್ಲಿ ಕೈಯಿಟ್ಟಲ್ಲಿ ಸ್ವರವಚನಕಾರರು ಸಿಕ್ಕುತ್ತಾರೆ. ಅವರೆಲ್ಲರ ಸ್ವರವಚನಗಳನ್ನು ಸಂಗ್ರಹಿಸಿ ಪ್ರಕಟಿಸಿದರೆ, ಅದೊಂದು ಸ್ವರವಚನ ಸಾಹಿತ್ಯ ಪ್ರಪಂಚಕ್ಕೆ ಅಮೂಲ್ಯ ಕೊಡುಗೆಯಾಗುತ್ತದೆ.

ಸ್ವರವಚನ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಇತ್ತೀಚೆ ಹೊಸ ಹುರುಪಿನಿಂದ ಪ್ರಕಟವಾಗತೊಡಗಿದ್ದು, ಈವರೆಗೆ ಹಲವಾರು ಸ್ವರವಚನ ಸಂಗ್ರಹಗಳು ಬೆಳಕು ಕಂಡಿವೆ. ಈ ಶ್ಲಾಘನೀಯ ಕಾರ್ಯದ ಮುಂದುವರಿಕೆಯು ಅಜ್ಞಾತವಾಗಿ ಉಳಿದಿದ್ದ ಸ್ವರವಚನಕಾರ ಹರಸೂರು ಅಣವೀರಪ್ಪ, ತನ್ನ ಸ್ವರವಚನ ಸಾಹಿತ್ಯದೊಂದಿಗೆ ಪರಿಚಯವಾಗುತ್ತಿದ್ದಾನೆ.

**ಜೀವನವೃತ್ತ:**

ಗುಲ್ಬರ್ಗಾದಿಂದ ಉತ್ತರಕ್ಕೆ ಸು. ೧೨ ಕಿ.ಮೀ.ಗಳ ಅಂತರ ಕ್ರಮಿಸಿ, ಅಲ್ಲಿಂದ ಬಲಗಡೆ ಹೊರಳುವ ರಸ್ತೆ ಹಿಡಿದು ಸು. ೧೦ ಕಿ.ಮೀ ಗಳ ಅಂತರದ ವರೆಗೆ ಮುಂದುವರಿದರೆ ಅಣವೀರಪ್ಪನ ಹರಸೂರು ಸಿಕ್ಕುತ್ತದೆ. ಇದು ಗುಲ್ಬರ್ಗಾ ತಾಲೂಕಿನಲ್ಲಿಯೇ ಬರುವ ಸ್ಥಳವಾಗಿದೆ.

ಅಣವೀರಪ್ಪನ ತಂದೆ ಕರಿಬಸವಪ್ಪ, ತಾಯಿ ರಾಚಮ್ಮ. ಈ ದಂಪತಿಗಳು ಹರಸೂರಿನವರೇ ಆದುದರಿಂದ ಅವರ ಮನೆತನವನ್ನು ಹರಸೂರಿನ ಮನೆತನವೆಂದೇ ಗುರುತಿಸಲಾಗಿದೆ. ಕೃಷಿ-ಬೆಲ್ಲದ ವ್ಯಾಪಾರ ಇವರ ಮನೆತನದ ವೃತ್ತಿಗಳಾಗಿದ್ದವು. ಹರಸೂರಿಗೆ ಪೂರ್ವದಲ್ಲಿ ೪-೫ ಕಿ.ಮೀ.ಗಳ ಅಂತರದಲ್ಲಿರುವ ಕನ್ನಡಿಗೆಯ ಮಲ್ಲಿಕಾರ್ಜುನ ಈ ಮನೆತನದ ಮನೆಯದೇವರು. ಹರಸೂರಿನ ಕಲ್ಮಠದ ಸ್ವಾಮಿಗಳು ಈ ಮನೆಯ ಗುರುಗಳು. ಈ ದಂಪತಿಗಳಿಗೆ ಏಕ ಮಾತ್ರ ಪುತ್ರ ಈ ಅಣವೀರಪ್ಪ. ಆದುದರಿಂದ ಬಹು ಮುದ್ದಿನಿಂದ ತಮ್ಮ ಮಗನನ್ನು ಬೆಳೆಸುತ್ತಾರೆ. ಹದಿಹರೆಯಕ್ಕೆ ಕಾಲಿಟ್ಟಾಗ ಅಣವೀರಪ್ಪ ಮನೆತನದ ಅಭಿವೃದ್ಧಿಯ ಕಡೆಗೆ ಲಕ್ಷ್ಯ ವಹಿಸದೆ ವಿಷಯಾಸಕ್ತನಾಗಿಬಿಡುತ್ತಾನೆ. ಊರಿನ ಪಶ್ಚಿಮದಿಕ್ಕಿಗೆ ಇರುವ ಕೆರೆಯ ದಂಡೆಯ ಮೇಲೆ ಹೋಗಿ ಕುಳಿತು, ಬಟ್ಟೆ ಒಗೆಯಲು ಬರುವ ತರುಣಿಯರನ್ನು ಕೆಣಕುವುದು ಇವನ ದೈನಂದಿನ ಕೆಲಸವಾಗಿಬಿಡುತ್ತದೆ. ಹೀಗಾಗಿ ಹಲವಾರು ದೂರುಗಳು ತಂದೆ ಕರಿಬಸವಪ್ಪನಲ್ಲಿಗೆ ಬರುವುದಕ್ಕೆ ಆರಂಭವಾಗುತ್ತವೆ. ಅಣವೀರಪ್ಪನ ಲಂಪಟತನವನ್ನು ಗುರುಲಿಂಗಸಿದ್ಧಕವಿ ಶರಣಬಸವೇಶ್ವರ ಪುರಾಣದಲ್ಲಿ ವರ್ಣಿಸುತ್ತಾನೆ.

ಅಣವೀರಪ್ಪನಿಗೆ ತಂದೆ ಕರಿಬಸವಪ್ಪ ಹತ್ತು-ಹಲವಾರು ರೀತಿಯಲ್ಲಿ ತಿಳಿಸಿ ಹೇಳುತ್ತಾನೆ, ಬೈದು ಬಡಿದು ಝುಂಕಿಸಿ ಬುದ್ಧಿಯ ಕಲಿಸಲು ನೋಡುತ್ತಾನೆ. ಅಣವೀರಪ್ಪ ದಿನಗಳೆದಂತೆ ಮಹಾ ಉದ್ಧಟನಾಗುತ್ತಲೇ ಬೆಳೆಯುತ್ತಾನೆ. "ಇದ್ದೊಬ್ಬ ಮಗನು ಹೀಗೆ ಕೆಡುತ್ತ ಹೋದರೆ ಮನೆತನದ ಮಾನ ಮರ್ಯಾದೆ ಎಲ್ಲಿಗೆ ಮುಟ್ಟಬೇಕು? ಎಂಬ ಪ್ರಶ್ನೆ ಚಿಂತೆಯ ಬೆಂಕಿಯಾಗಿ ದಂಪತಿಗಳನ್ನು ಸುಡುವುದಕ್ಕೆ ಆರಂಭವಾಗುತ್ತದೆ. ಒಂದು ದಿನ ಸಮಯ ಮಾಡಿಕೊಂಡು ಕಲ್ಮಠಕ್ಕೆ ಹೋಗಿ, ಗುರುಗಳಿಗೆ ದೀರ್ಘದಂಡ ಪ್ರಣಾಮಗಳನ್ನು ಸಲ್ಲಿಸಿ, ತಮ್ಮ ಚಿಂತೆಯನ್ನು ನಿವೇದಿಸಿಕೊಳ್ಳುತ್ತಾರೆ. ಕಲ್ಮಠದ ಸ್ವಾಮಿಗಳಾದರೂ ಅಣವೀರಪ್ಪನ ಕೆಟ್ಟ ಕೃತ್ಯಗಳನ್ನು ಕೇಳಿದವರೇ ಆಗಿರುತ್ತಾರೆ. ತಮ್ಮ ತರುಣ ಶಿಷ್ಯನನ್ನು ತಿದ್ದುವುದು ದುಷ್ಕರವಾಗಿಯೇ ಕಾಣುತ್ತದೆ. ಆದರೂ ಒಳ್ಳೆಯ ಪ್ರಯತ್ನ ಪ್ರಮಾದವಲ್ಲವೆಂದು ಭಾವಿಸಿಕೊಂಡು "ಗುರುವಾದವನು ಶಿಷ್ಯನನ್ನು ಸರಿದಾರಿಗೆ ಹಚ್ಚದಿದ್ದರೆ ಅವನೆಂಥ ಗುರುವು?" ಎಂಬ ದೃಢ ಸಂಕಲ್ಪ ಮನದಲ್ಲಿ ತಾಳಿ, ಅಣವೀರಪ್ಪನನ್ನು ತಿದ್ದಲು ಒಪ್ಪಿಕೊಳ್ಳುತ್ತಾರೆ.

ಒಂದು ದಿನ ಕರಿಬಸಪ್ಪ ಭಕ್ತಿಯಿಂದ ಗುರುಗಳನ್ನು ತನ್ನ ಮನೆಗೆ ಬಿನ್ನಹಕ್ಕೆ ಆಮಂತ್ರಿಸುತ್ತಾನೆ. ಗುರುಗಳ ಪೂಜಾಸಂದರ್ಭದಲ್ಲಿ ತನ್ನ ಮಗನು ಇರಬೇಕೆಂದು ಬಯಸಿ, ಅವನನ್ನು ಹೊರಗೆ ಹೋಗದಂತೆ ತಡೆಯುತ್ತಾನೆ. ಆದರೂ ಅಣವೀರಪ್ಪ ತಂದೆ-ತಾಯಿಗಳ ಕಣ್ಣು ತಪ್ಪಿಸಿ, ಮನೆಗೆ ಗುರುಗಳು ಬರುವ ಪೂರ್ವದಲ್ಲೇ ಮಟಮಾಯವಾಗಿರುತ್ತಾನೆ. ಏನಾದರೇನು? ಗುರುಗಳಿಗೆ ಬಿನ್ನಹ ನೀಡಲಾಗಿದೆ. "ದೇವರಿಚ್ಛೆ ಏನಿದೆಯೋ ಅಂತಾಗಲಿ" ಎಂದು ನಿಶ್ಚೈಯಿಸಿಕೊಂಡ ಕರಿಬಸಪ್ಪ, ಗುರುಗಳನ್ನು ಮನೆಗೆ ಕರೆದುಕೊಂಡು ಬಂದು ಶ್ರದ್ಧೆಯಿಂದ ಅರ್ಚನೆ-ಪಾದೋದಕಾದಿಗಳನ್ನು ಮಾಡಿ ಕೃತಾರ್ಥನಾಗುತ್ತಾನೆ. ತಾಯಿ ರಾಚಮ್ಮ ಹತ್ತು-ಹಲವು ಬಾರಿ ಹೊರಗೆ ಹೋಗಿ "ಅಣವೀರಪ್ಪ ಈಗ ಬಂದಾನು, ಆಗ ಬಂದಾನು" ಎಂದು ದಾರಿ ನೋಡಿಯೇ ನೋಡುತ್ತಾಳೆ. ಗುರುಗಳ ಬಿನ್ನಹ ಮುಗಿದರೂ ಅಣವೀರಪ್ಪನ ಆಗಮನದ ಸುಳಿವು ಕಾಣುವುದೇ ಇಲ್ಲ. ಬಿನ್ನಹ ಪೂರೈಸಿದ ಕರಿಬಸವಪ್ಪ ಗುರುಗಳಿಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ತಿಳಿಸಿ, ಮಗನನ್ನು ಹುಡುಕಿ ತರಲು ಹೋಗುತ್ತಾನೆ. ಕೆರೆಯ ದಂಡೆಯ ಮೇಲಿರಬಹುದೆಂದು ಹೋಗಿ ನೋಡುತ್ತಾನೆ. ಅಲ್ಲಿ ಅವನು ಕಾಣುವುದಿಲ್ಲ. ಅಲ್ಲಲ್ಲಿ ಕೇಳಿ ನೋಡುತ್ತಾನೆ. ಯಾರೂ ಅವನ ಬಗೆಗೆ ತಿಳಿಸುವುದೇ ಇಲ್ಲ. ಹೀಗಾಗಿ ಬೇಸತ್ತು ಮರಳಿ ಮನೆಗೆ ಬರುತ್ತಾನೆ. ಗುರುಗಳು ವಿಶ್ರಾಂತಿ ಪೂರೈಸಿ, ಇನ್ನೇನು ಮಠಕ್ಕೆ ಹೊರಡಬೇಕೆಂದು ಅಣಿಯಾಗಿ ಕುಳಿತಿರುತ್ತಾರೆ. ಇನ್ನು ದಕ್ಷಿಣೆ ನೀಡಿ ಗುರುಗಳನ್ನು ಮಠಕ್ಕೆ ಕಳುಹಿಸಿಕೊಡಬೇಕು. ಕರಿಬಸಪ್ಪನ ನಿರಾಶೆಯ ಮುಖವನ್ನು ಕಂಡ ಗುರುಗಳು" ಅಣವೀರಪ್ಪ ಸಿಗಲಿಲ್ಲವೇನು? ಇರಲಿ ಬಿಡು, ಇಂದಲ್ಲ ನಾಳೆ ನಾನೇ ಮಠಕ್ಕೆ ಅವನನ್ನು ಕರೆಯಿಸಿ ಬುದ್ಧಿ ಹೇಳುತ್ತೇನೆ" ಎಂದು ನುಡಿಯುವುದರೊಳಗೆಯೇ ಎಲ್ಲಿಂದಲೋ ಅಣವೀರಪ್ಪ ಬಿರುಗಾಳಿಯಂತೆ ಬರುತ್ತಾನೆ. ತಂದೆ ತಾಯಿಗಳಿಗೆ ಹೋದ ಜೀವ ಬಂದಂತಾಗುತ್ತದೆ. ಮನೆಯೊಳಗೆ ಬಂದವನೆ, ಯಾರೊಡನೆಯೂ ಮಾತನಾಡದೆ ಅಡುಗೆಯ ಮನೆಗೆ ನುಗ್ಗುತ್ತಾನೆ. ಕೈಕಾಲು ಮುಖ ತೊಳೆದುಕೊಳ್ಳದೆಯೇ ತಾಯಿಯನ್ನು ಊಟಕ್ಕೆ ನೀಡಲು ಕರೆಯದೆ, ತನ್ನ ತಾನೇ ಊಟಕ್ಕೆ ತೆಗೆದುಕೊಂಡು ಅವಸರದಿಂದ ಉಣ್ಣಲು

ರಂಭಿಸುತ್ತಾನೆ. ತಾಯಿ ಒಳಗೆ ಹೋಗಿ ವ್ಯವಸ್ಥಿತವಾಗಿ ಉಣ್ಣಲು ನೀಡುವಾಗ, ಅಣವೀರಪ್ಪ ಸಿಡಿಮಿಡಿಗೊಂಡು ಊಟ ಮುಗಿಸುತ್ತಾನೆ. ನೀರು ಕುಡಿದು ಮತ್ತೆ ಹೊರಗೆ ಜಿಗಿಯಬೇಕೆನ್ನುವ ಹವಣಿಕೆಯಲ್ಲಿರುವಾಗ ಗುರುಗಳು "ಅಣವೀರಪ್ಪ ಇಲ್ಲಿ ಬಾ"ಯೆಂದು ಕರೆಯುತ್ತಾರೆ. ಗತ್ಯಂತರವಿಲ್ಲದೆ ಅಣವೀರಪ್ಪ ಬಂದು, ಗುರುಗಳ ಎದುರು ತಲೆಬಾಗಿ ನಿಲ್ಲುತ್ತಾನೆ. ಆಗ ಗುರುಗಳು "ಇಂದು ನಿಮ್ಮ ತಂದೆತಾಯಿಗಳು ನನಗೆ ಬಿನ್ನಹ ಮಾಡಿದ್ದರು. ಮನೆಯ ಮಗನಾಗಿ, ಈ ಮನೆಯ ಭಾವಿ ಮಾಲಿಕನಾಗಿ ನೀನು ಬಿನ್ನಹ ತೀರಿಸಬೇಕಾಗಿತ್ತು. ಆದರೂ ಕೊನೆಗೆ ಬಂದೆಯಲ್ಲ, ಸಂತೋಷ. ನಿಮ್ಮ ತಂದೆತಾಯಿಗಳು ಬಿನ್ನಹ ಪೂರೈಸಿದ್ದಾರೆ. ಈಗ ನೀನು ಗುರುದಕ್ಷಿಣೆ ಕೊಡಬೇಕು. ನಾವು ಮಠಕ್ಕೆ ಬೇಗನೆ ಹೊರಡಬೇಕು" ಎನ್ನುತ್ತಾರೆ. ಕೆಲವು ಕ್ಷಣಗಳ ವರೆಗೆ ಏನೂ ಮಾತನಾಡದ ಅಣವೀರಪ್ಪ ಸಾವಕಾಶವಾಗಿ ತುಟಿ ಬಿಚ್ಚಿ ಸದ್ದು ಮಾಡುತ್ತ "ಆಗಲಿ ಗುರುಗಳೆ, ಗುರುದಕ್ಷಿಣೆ ನೀಡಿ ತಮಗೆ ಮಠಕ್ಕೆ ಕಳುಹಿಸಿ ಬರುತ್ತೇನೆ" ಎಂದು ನುಡಿಯುತ್ತಾನೆ. ಆಗ ಗುರುಗಳು "ಅಣವೀರಪ್ಪ ನೀನು ಏನು ಗುರುದಕ್ಷಿಣೆ ನೀಡುವೆ?" ಎಂದು ಪ್ರಶ್ನಿಸುತ್ತಾರೆ. ಥಟ್ಟನೆ ಅಣವೀರಪ್ಪ "ತಾವು ಏನು ಬೇಡುವಿರೋ ಅದನ್ನು ಇಲ್ಲೆನ್ನದೆ ನೀಡುತ್ತೇನೆ. ಏನು ಕಡಿಮೆಯಾಗಿದೆ ಮನೆಯಲ್ಲಿ" ಎಂದು ನುಡಿಯುತ್ತಾನೆ. ಗುರುಗಳು "ನೋಡು ಅಣವೀರಪ್ಪ, ಬೇಡಿದ ಗುರುದಕ್ಷಿಣೆ ಇಲ್ಲವೆನ್ನಲು ಬಾರದು" ಎಂದು ಇನ್ನೊಮ್ಮೆ ಎಚ್ಚರಿಸುತ್ತಾರೆ. ಆಗಲೂ ಅಣವೀರಪ್ಪ ಮೊದಲಿನ ದೃಢ ನುಡಿಯನ್ನೇ ಪುನರುಚ್ಚರಿಸುತ್ತಾನೆ. ಆಗ ಗುರುಗಳು ತಮ್ಮ ಹೆಗಲ ಮೇಲಿನ ಶಲ್ಯವನ್ನು ತೆಗೆದು, ಎದುರು ಒಡ್ಡುತ್ತ "ಅಣವೀರಪ್ಪ, ನಿನ್ನಲ್ಲಿರುವ ಎಲ್ಲ ದುಷ್ಟ ಗುಣಗಳನ್ನೇ ಇಂದು ನನಗೆ ಗುರುದಕ್ಷಿಣೆಯಾಗಿ ನೀಡಬೇಕು. ನೀಡುವೆಯಾ?" ಎಂದು ಕೇಳುತ್ತಾರೆ. ಆಗ ಅಣವೀರಪ್ಪ ಏನೂ ಮೀನ ಮೇಷ ಎಣಿಸದೆ "ಆಗಲಿ ಗುರುಗಳೆ, ಇಂದು ನಾನು ನನ್ನಲ್ಲಿರುವ ಎಲ್ಲ ದುರ್ಗುಣಗಳನ್ನು ಕೂಡಿಸಿ ಗುರುದಕ್ಷಿಣೆಯಾಗಿ ಅರ್ಪಿಸಿದ್ದೇನೆ. ಇನ್ನು ಮುಂದೆ ತಾವು ನನ್ನಲ್ಲಿ ಒಂದು ದುರ್ಗುಣವನ್ನೂ ಕಾಣಲಾರಿರಿ" ಎಂದು ಪಾದಕ್ಕೆ ದೀರ್ಘಪ್ರಣಾಮ ಹಾಕುತ್ತಾನೆ. ಗುರುಗಳು ಎರಗಿದ ಶಿಷ್ಯನನ್ನು ಹಿಡಿದೆತ್ತಿ ತಲೆಯ ಮೇಲೆ ಕೈ ಆಡಿಸಿ, "ನಿನಗೆ ಒಳ್ಳೆಯದಾಗಲಿ" ಎಂದು ಆಶೀರ್ವದಿಸುತ್ತಾರೆ. ತಂದೆತಾಯಿಗಳಿಗೆ ಅತೀವ ಆನಂದವಾಗುತ್ತದೆ.

ಗುರುವಿನ ಸಂಸ್ಪರ್ಶದಿಂದ ಅಣವೀರಪ್ಪನ ಜೀವನದ ಗತಿಯೇ ಬದಲಾಗುತ್ತದೆ. ಈಗ ಅವನು ಪರಿಶುದ್ಧಭಾವಿಯಾಗಿ ಶರಣ ಜೀವನವನ್ನು ನಡೆಯಿಸಲು ದೃಢ ನಿರ್ಧಾರ ಕೈಗೊಳ್ಳುತ್ತಾನೆ. ಶರಣನಿಗೊಂದು ಕಾಯಕವು ಬೇಕೆಂಬ ಕಾರಣದಿಂದ, ಮನೆತನದ ವೃತ್ತಿ ಬೆಲ್ಲ ಮಾರುವ ವ್ಯಾಪಾರವನ್ನೇ ತಾನು ನಿರ್ವಹಿಸಿಕೊಂಡು ಕಾಯಕದಲ್ಲಿ ತೊಡಗುತ್ತಾನೆ. ಬೀದರ ಜಿಲ್ಲೆಯ ಚಿಟಗುಪ್ಪಿಯ ಕೋಮಟಿ ಶೆಟ್ಟಿಯಲ್ಲಿ ಬೆಲ್ಲವನ್ನು ಖರೀದಿಸಿ ಹಳ್ಳಿಯೂರು, ಸಂಗಪೇಟೆಗಳಲ್ಲಿ ಮಾರುವುದಕ್ಕೆ ತೊಡಗುತ್ತಾನೆ. ತನ್ನ ತಂದೆಯಂತೆಯೇ ಹೇಗೆತ್ತಿನ ಮೇಲೆ ಈ ಬೆಲ್ಲದ ವ್ಯಾಪಾರವನ್ನು ಅಣವೀರಪ್ಪ ಸರಿಯಾಗಿಯೇ ನಡೆಸುತ್ತಾನೆ.

*

ಚಿಟಗುಪ್ಪಿಯ ಕೋಮಟಿ ಶೆಟ್ಟಿಯು ಅಣವೀರಪ್ಪನ ಶರಣ ಸ್ವಭಾವವನ್ನು ಅರಿಯದೆ, ಅವನೊಬ್ಬ ಹುಂಬನೆಂದು ತಿಳಿದು, ಒಂದು ಸಲ ಮೋಸ ಮಾಡಲೆಂದು ಬಗೆದು

ಹದಿನಾರು ಮಣ ಬೆಲ್ಲ ಕೊಡುವುದಕ್ಕೆ ಬದಲಾಗಿ, ಹದಿನಾಲ್ಕು ಮಣ ತೂಗಿ ಕೊಟ್ಟು ಅದು ಹದಿನಾರು ಮಣವೆಂದು ಸುಳ್ಳು ಹೇಳುತ್ತಾನೆ. ಕೋಮಟಿಯ ಕಪಟವರಿಯದ ಅಣವೀರಪ್ಪ ಬೆಲ್ಲವನ್ನು ತಂದು ಮಾರುತ್ತಾನೆ. ಅದು ಹದಿನಾರು ಮಣವೇ ತೂಗುತ್ತದೆ. ಭೆಲ್ಲ ಮಾರಿದ ನಂತರ ಮತ್ತೆ ಕೋಮಟಿಯಲ್ಲಿಗೆ ಹೋಗಿ "ನೀನು ಹಿಂದೆ ಕೊಟ್ಟ ಬೆಲ್ಲದ ತೂಕ ಸರಿಯಿತ್ತು; ಈ ಸಲವೂ ಹದಿನಾರು ಮಣ ಬೆಲ್ಲ ಕೊಡಬೇಕು" ಎಂದು ಕೇಳುತ್ತಾನೆ. ಕೋಮಟಿಗೆ ಆಶ್ಚರ್ಯವಾಗುತ್ತದೆ. ತಾನು ಹದಿನಾಲ್ಕು ಮಣ ಕೊಟ್ಟರೂ, ಅಣವೀರಪ್ಪ ಹದಿನಾರು ಮಣವೆಂದು ಒಪ್ಪಿದ್ದಕ್ಕೆ ಕೋಮಟಿ ಶೆಟ್ಟಿ ಒಳಗಿಂದೊಳಗೆ ನಗುತ್ತಾನೆ. ಆದರೂ ಏಕೋ ಕೋಮಟಿಯ ಮನಸ್ಸು ಈ ಸಲ ಮೋಸ ಮಾಡುವುದಕ್ಕೆ ಒಪ್ಪುವುದಿಲ್ಲ. ಹೀಗಾಗಿ ಹಿಂದೆ ತಾನು ಕೊಟ್ಟ ಕಡಿಮೆಯಾದ ಎರಡು ಮಣಗಳನ್ನು ಕೂಡಿಸಿ, ಈ ಸಲ ಅವನು ಹದಿನೆಂಟು ಮಣ ಬೆಲ್ಲವನ್ನು ತೂಗಿ ಹಾಕುತ್ತಾನೆ. ಆದರೆ ಅದು ಹದಿನಾರು ಮಣವೆಂದೇ ಕೋಮಟಿ ಅಣವೀರಪ್ಪನಿಗೆ ತಿಳಿಸುತ್ತಾನೆ. ಎಂದಿನಂತೆ ಅಣವೀರಪ್ಪ ಅದನ್ನು ತಂದು ಪೇಟೆಯಲ್ಲಿ ಮಾರಿದಾಗ ಹದಿನಾರು ಮಣವೇ ಆಗುತ್ತದೆ. ಮತ್ತೆ ಅಣವೀರಪ್ಪ ಕೋಮಟಿಯಲ್ಲಿಗೆ ಬೆಲ್ಲದ ಖರೀದಿಗೆ ಹೋಗುತ್ತಾನೆ. "ಈ ಸಲದ ಬೆಲ್ಲದ ತೂಕ ಎಷ್ಟಿತ್ತು?" ಎಂದು ಕೇಳುತ್ತಾನೆ, ಕೋಮಟಿ ಶೆಟ್ಟಿ. ಅಣವೀರಪ್ಪ "ಅದೇ ಹದಿನಾರು ಮಣ"ವೆಂದು ಉತ್ತರಿಸುತ್ತಾನೆ. ಈಗ ಕೋಮಟಿಗೆ ಇಮ್ಮಡಿ ಆಶ್ಚರ್ಯ ಆಗುತ್ತದೆ. "ಹಿಂದೆ ಕಡಿಮೆ ಕೊಟ್ಟಾಗಲೂ, ಹದಿನಾರು ಮಣವೇ ಆಯಿತು. ಈಗ ಹೆಚ್ಚು ಕೊಟ್ಟಾಗಲೂ ಹದಿನಾರು ಮಣವೇ ಆಯಿತು. ಹೀಗೆಂದರೆ ಈ ಮನುಷ್ಯ ಸಾಮಾನ್ಯನಲ್ಲ. ಇವನ ಮೇಲೆ ದೈವೀ ಕೃಪೆಯಿದೆ. ಆದುದರಿಂದಲೇ ಈ ಆಶ್ಚರ್ಯವು ಘಟಿಸಿದೆ" ಎಂದು ಕೋಮಟಿಯ ಮನಸ್ಸು ನುಡಿಯುತ್ತದೆ. ಕೋಮಟಿ ತಾನು ಮಾಡಿದ ಮೋಸವನ್ನು ಬಿಚ್ಚಿ ಅಣವೀರಪ್ಪನಿಗೆ ತಿಳಿಸಿ ಕ್ಷಮೆ ಬೇಡುತ್ತಾನೆ.

ಕೋಮಟಿಯ ನಾಲಗೆಯಿಂದ ವ್ಯಾಪಾರದಲ್ಲಿನ ಮೋಸವನ್ನು ತಿಳಿದಾಗ, ಅಣವೀರಪ್ಪನಿಗೆ ಹಾವು ಕಂಡಷ್ಟು ಹೆದರಿಕೆಯಾಗುತ್ತದೆ. "ವ್ಯಾಪಾರದಲ್ಲಿಯೂ ಮೋಸ ಮಾಡುವುದಕ್ಕೆ ಆಸ್ಪದವಿದೆಯೆಂದರೆ ಮೋಸದ ಈ ವ್ಯಾಪಾರ ನನಗೇಕೆ ಬೇಕು? ನಾನೂ ಈ ವ್ಯಾಪಾರದ ಮುಖಾಂತರ ಮೋಸದಲ್ಲಿ ತೊಡಗಬಹುದು. ಆದುದರಿಂದ ಈ ಕೂಡಲೇ ಈ ವೃತ್ತಿಯನ್ನು ಬಿಡಬೇಕು" ಎಂದು ನಿರ್ಧರಿಸಿದ ಅಣವೀರಪ್ಪನು ಬೆಲ್ಲದ ವ್ಯಾಪಾರ ಬಿಟ್ಟುಬಿಡುತ್ತಾನೆ. ಈ ಬೆಲ್ಲದ ವ್ಯಾಪಾರದ ರಹಸ್ಯವನ್ನೇ ಕುರಿತು ಅಣವೀರಪ್ಪ ಒಂದೆಡೆಯಲ್ಲಿ ಹಾಡಿದ್ದಾನೆ.

ತಂದೆತಾಯಿಗಳು ಅಣವೀರಪ್ಪನಿಗೆ ಮದುವೆ ಮಾಡಲೆಂದು ಅತ್ತಿತ್ತ ಹೆಣ್ಣು ನೋಡುವುದಕ್ಕೆ ಆರಂಭಿಸುತ್ತಾರೆ. ಆಗ ಅಣವೀರಪ್ಪ ಖಡಾಖಂಡಿತನಾಗಿ ತಂದೆತಾಯಿಗಳನ್ನು ಕುರಿತು "ಕಲ್ಮಠದ ಗುರುದೇವರು ನನಗೆ ಅಂದೇ ಮದುವೆ ಮಾಡಿ ಬಿಟ್ಟಿದ್ದಾರೆ. ಲಿಂಗದೇವನನ್ನು ನನಗೆ ನೀಡಿ, ಅವನ ಸೇವೆಯನ್ನೇ ಮಾಡುವಂತೆ ಹೇಳಿದ್ದಾರೆ. ಆದುದರಿಂದ ನಾನೇ ಲಿಂಗದೇವನ ಸೇವಕನಾಗಿರುವಾಗ, ನನಗಾರ ಸೇವೆಯೂ ಬೇಡ. ಸೇವೆಗೆ ಬಾಧ್ಯಕಸ್ಥಳಾಗುವ ಸತಿಯೂ ಬೇಡ"ವೆಂದು ಹೇಳಿ ನಿರಾಕರಿಸುತ್ತಾನೆ.

ದೇಶಸಂಚಾರಕ್ಕೆ ಹೊರಟಾಗ ಅಣವೀರಪ್ಪನ ವಯಸ್ಸು ಸುಮಾರು ೩೦ ವರುಷ. ಮನೆಬಿಟ್ಟು; ತಂದೆತಾಯಿಗಳನ್ನು ಬಿಟ್ಟು ಅಲ್ಲಲ್ಲಿ ಶರಣರನ್ನು, ಭಕ್ತರನ್ನು ಕಾಣುತ್ತ, ಲೋಕದ ಜನರುಗಳ ಕಷ್ಟವನ್ನು ಪರಿಹಾರಗೊಳಿಸಿ, ಅವರಿಗೆ ತನ್ನ ಕೈಲಾದ ಸಹಾಯವನ್ನು ಮಾಡುತ್ತ ಹೊರಡುತ್ತಾನೆ. ವೀರಶೈವ ಧರ್ಮದಲ್ಲಿ ನಿಷ್ಠನಾಗಿ, ಮಠದ ಸ್ವಾಮಿಗಳಂತೆ ಅರ್ಚನ-ಅರ್ಪಣ-ಅನುಭಾವದಲ್ಲಿ ಅನನ್ಯವಾಗಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ದಿನಗಳೆದಂತೆ ಅಣವೀರಪ್ಪನ ಸಾನಿಧ್ಯವು ಕಾರಣಿಕ ಸಾನಿಧ್ಯವೆನಿಸಲು ತೊಡಗುತ್ತದೆ. ಸಂಪರ್ಕ ಹೊಂದಿದ ಭಕ್ತಾದಿ ಜನಗಳಿಗೆ. ಅಣವೀರಪ್ಪ ಹೋದಲೆಲ್ಲ ಅವನನ್ನು ಕಾಣಲು ಭಕ್ತರು ಗುಂಪುಗುಂಪಾಗಿ ಬರುವುದಕ್ಕೆ ಆರಂಭಿಸುತ್ತಾರೆ. ಅಣವೀರಪ್ಪ ಬಂದ ಭಕ್ತರಿಗೆ ಯಾವ ಉಪದೇಶವೂ ಮಾಡುತ್ತಿರಲಿಲ್ಲವಂತೆ. ಅವರೊಡನೆ ಕೂಡಿ, ತಾನೇ ಆಶುಕವಿತ್ವ ಶಕ್ತಿಯಿಂದ ಕಟ್ಟಿದ ಹಾಡುಗಳನ್ನು ಹಾಡಿ, ಭಜನೆ ಮಾಡುತ್ತಿದ್ದನಂತೆ. ಅವನು ಅಂಕಲಗಿ, ನಾಗೂರು, ಬಸವಕಲ್ಯಾಣ, ಹುಲಸೂರು, ಕಾಸಂಪಳ್ಳಿ, ಕಲಬುರ್ಗಿ ಮುಂತಾದ ಪ್ರದೇಶಗಳನ್ನೆಲ್ಲ ಸಂಚರಿಸಿ, ಕೊನೆಯಲ್ಲಿ ಶ್ರೀಶೈಲದೆಡೆಗೆ ಹೋದಂತೆ ಪ್ರತೀತಿ. ಬಹುಶಃ ಅಣವೀರಪ್ಪ ತನ್ನ ಜೀವನದ ಕೊನೆಯ ಭಾಗವನ್ನು ಶ್ರೀಶೈಲದಲ್ಲಿಯೇ ಕಳೆದಂತೆ ಸಂಭಾವಿಸಬಹುದಾಗಿದೆ. ಏಕೆಂದರೆ ಹರಸೂರಿನಲ್ಲಿಯಾಗಲಿ; ಅದರ ಸುತ್ತಮುತ್ತಲಿನ ಪ್ರದೇಶದಲ್ಲಿಯಾಗಲಿ ಅವನ ಸಮಾಧಿ ಸ್ಮಾರಕವು ಸಿಕ್ಕುವುದಿಲ್ಲ.

ವೀರಶೈವಧರ್ಮಾನುಸಂಧಾನಿಯಾಗಿ, ಶರಣಶ್ರೇಷ್ಠನಾಗಿ, ಹಲವಾರು ಪವಾಡಗಳನ್ನು ಮೆರೆಸುವ ಮೂಲಕ ಜನತೆಯ ಸೌಖ್ಯವನ್ನೇ ಜೀವನಪೂರ್ತಿ ಎಸಗಿದ ಅಣವೀರಪ್ಪನು ೮೦ ವರ್ಷಗಳ ಕಾಲ ಬದುಕಿರಬಹುದೆಂದು ಊಹಿಸಲಾಗಿದೆ. ಜನ ಪ್ರತೀತಿಯ ಪ್ರಕಾರ "ಅಣವೀರಪ್ಪನವರು ಕಲಬುರ್ಗಿಯ ಶರಣಬಸವರಿಗೆ ಹಿರಿಯ ಸಮಕಾಲೀನರಾಗಿ ಬದುಕಿದವರು" ಎಂಬುದಾಗಿ ತಿಳಿಯುತ್ತದೆ. ಶರಣಬಸವರ ಕಾಲವು ಕ್ರಿ.ಶ. ೧೭೪೬-೧೮೨೨. ಶರಣಬಸವರಿಗಿಂತಲೂ ಅಣವೀರಪ್ಪ ಹಿರಿಯನಾಗಿರುವುದರಿಂದ ಅವನ ಕಾಲವು ಕ್ರಿ.ಶ. ೧೭೪೬ಕ್ಕಿಂತಲೂ ಹಿಂದೆ ಹೋಗುತ್ತದೆ. "ಅಣವೀರಪ್ಪನು ಶರಣಬಸವರಿಗಿಂತಲೂ ಎಷ್ಟು ವರುಷ ಹಿರಿಯರಾಗಿದ್ದರು?"- ಎಂಬ ಪ್ರಶ್ನೆಗೆ ಮತ್ತೆ ಉತ್ತರ ಕಂಡುಕೊಳ್ಳಲು ಜನರ ಹೇಳಿಕೆಗಳನ್ನೇ ಅವಲಂಬಿಸಬೇಕಾಗಿದೆ.[1] ಆ ಹೇಳಿಕೆಗಳ ಪ್ರಕಾರ "ಅಣವೀರಪ್ಪ ಶರಣರಿಗಿಂತಲೂ ೧೦-೧೨ ವರ್ಷ ಹಿರಿಯರಾಗಿದ್ದರೆಂದು ತಿಳಿಯುತ್ತದೆ. ಆದುದರಿಂದ ಅಣವೀರಪ್ಪನ ಜನನದ ಕಾಲವು ಕ್ರಿ.ಶ. ಸು ೧೭೩೬ ಅಥವಾ ೧೭೩೪ ಎಂದು ಇರಿಸಿಕೊಳ್ಳಬೇಕಾಗುತ್ತದೆ. ಅಣವೀರಪ್ಪನು ಸು. ೮೦ ವರ್ಷಗಳ ಕಾಲ ಬದುಕಿದವನೆಂದಾದರೆ, ಅವನ ಲಿಂಗೈಕ್ಯದ ಕಾಲವು ಕ್ರಿ.ಶ. ಸು.೧೮೧೬ ಅಥವಾ ೧೮೧೪ ಎಂದಾಗುತ್ತದೆ. ಅಣವೀರಪ್ಪ ಎಲ್ಲಿ ಲಿಂಗೈಕ್ಯನಾದನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಎಲ್ಲಿಯೂ ಅವನ ಸಮಾಧಿಯ ಕುರುಹುಗಳು ಸಿಕ್ಕುವುದಿಲ್ಲ. "ಹರಸೂರು ಅಣವೀರಪ್ಪ"ನೆಂದೇ ಜನರ ನಾಲಗೆಯಲ್ಲಿ ಖ್ಯಾತನಾದ ಈ ಸ್ವರವಚನಕಾರ, ಅವನು ಬಿಟ್ಟುಹೋಗಿರುವ ಸ್ವರವಚನಗಳಲ್ಲಿ ಇಂದಿಗೂ ಉಳಿದುಕೊಂಡಿರುವನು.

---

೧. ಶ್ರೀಯುತರಾದ ಗುರುಪಾದಪ್ಪ ಕಾಂತಾ, ಶಿವಶರಣಪ್ಪ ಮಾಸ್ತರ ದುಸುರಿ, ಶ್ರೀ ಶಂಕರಯ್ಯಸ್ವಾಮಿ ಮುಂತಾದವರು.

# ಕೃತಿ ವಿಚಾರ

ಹರಸೂರು ಅಣವೀರಪ್ಪ ಎಷ್ಟು ಸ್ವರವಚನಗಳನ್ನು ಹಾಡಿರುವನೆಂಬುದರ ಬಗೆಗೆ ಯಾರೂ ಲೆಕ್ಕವಿಟ್ಟು ಹೇಳುವುದಿಲ್ಲ. ಬಹು ಜನರಿಗೆ ಇವನೊಬ್ಬ ಕವಿಯಾಗಿದ್ದನೆಂಬುದೂ ತಿಳಿಯದೆ ಇರುವುದು ಬಹು ಖೇದದ ಸಂಗತಿ. ಹರಸೂರಿನ ಕಲ್ಮಠದಲ್ಲಿದ್ದ ಹಲವು ಹಸ್ತಪ್ರತಿಗಳ ನಡುವೆ ಚೆಲ್ಲಾಪಿಲ್ಲಿಯಾಗಿ ಹರವಿಕೊಂಡಿದ್ದ ಈ ಸ್ವರವಚನಗಳು ಕೂಡಿಸಿ ನೋಡಿದಾಗ ೮೯ ಸ್ವರವಚನಗಳೆಂದು ಗೊತ್ತಾಗಿದೆ. ಆದರೆ ಕಳೆದು ಹೋಗಿರುವ, ನಾಶವಾಗಿರುವ ಸ್ವರವಚನಗಳ ಲೆಕ್ಕವು ಆ ಕಾಲಪುರುಷನಿಗೂ ಸಿಗಲಿಕ್ಕಿಲ್ಲ.

**ಸ್ಥಲಕಟ್ಟು:**

ಈ ಕೃತಿಯಲ್ಲಿನ ಸ್ವರವಚನಗಳನ್ನು ಸ್ಥಲಕ್ಕನುಗುಣವಾಗಿ ವಿಂಗಡಿಸಿಕೊಂಡು ಗಮನಿಸಲಾಗಿದೆ. ಆದರೆ ಇದೇ ವ್ಯವಸ್ಥೆಯ ಕ್ರಮದಲ್ಲಿ ಅಣವೀರಪ್ಪನು ತನ್ನ ಸ್ವರವಚನಗಳನ್ನು ಹಾಡಿದನೆಂದಲ್ಲ. ಸಾಂದರ್ಭಿಕವಾಗಿ ಅಣವೀರಪ್ಪ ಹಾಡಿದ ಸ್ವರವಚನಗಳಲ್ಲಿನ ವಿಷಯವನ್ನು ದೃಷ್ಟಿಯಲ್ಲಿರಿಸಿಕೊಂಡು ಆಯಾ ವಿಷಯದ ಅಡಿಯಲ್ಲಿ ಬರುವ ಪದಗಳನ್ನು ಒಂದೆಡೆ ತಂದು ಸಂಗ್ರಹಿಸಲಾಗಿದೆ. ಹೀಗೆ ಮಾಡುವುದರಿಂದ ಅಭ್ಯಾಸಕ್ಕೆ ಹೆಚ್ಚು ಅನುಕೂಲವಾಗುತ್ತದೆಂಬುದು ಅಧ್ಯಯನಶೀಲರಿಗೆ ಅರಿಯದ ವಿಷಯವೇನಲ್ಲ. ಆದುದರಿಂದ ನಾನು ಒಟ್ಟು ಪದ್ಯಗಳನ್ನು ಎದುರಿಸಿಕೊಂಡು, ಅನುಕ್ರಮವಾಗಿ ವಿಂಗಡಣೆ ಮಾಡಿಕೊಂಡು, ಅವಕ್ಕೆ ಸರಿಹೊಂದುವ ಸ್ವರವಚನಗಳನ್ನು ಅಲ್ಲಲ್ಲಿ ಸೇರಿಸಿ, ಅವುಗಳಿಗೆ ಸೂಕ್ತವಾದ ತಲೆಬರಹವಿರಿಸಿ, ಸ್ಥಲಕಟ್ಟಿನ ಪರಂಪರೆಯ ಹಿನ್ನೆಲೆಯಲ್ಲಿ ಒಂದೊಂದು ಭಾಗಕ್ಕೂ ಒಂದೊಂದು ಸ್ಥಲವೆಂದು ಹೆಸರು ನೀಡಿದ್ದೇನೆ. ಪ್ರಾರ್ಥನಾಸ್ಥಲ, ಮಾಯೆ ಮಾಯಾವಿಡಂಬನಸ್ಥಲ, ಸಂಸಾರಹೇಯಸ್ಥಲ, ಜೀವಸಂಬೋಧನಸ್ಥಲ, ಆತ್ಮಸ್ಥಲ, ಗುರುಕರುಣಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಅಷ್ಟಾವರಣಸ್ಥಲ, ಷಟ್‌ಸ್ಥಲ ಹೀಗೆ ಇಲ್ಲಿನ ಸ್ಥಲಕಟ್ಟು ಪರಂಪರೆ ಬೆಳೆದಿರುವುದು. ಈ ಸ್ಥಲಗಳಿಗೆ ಹೊರಗಾಗಿರುವ ಸ್ವರವಚನಗಳನ್ನು 'ಸಂಕೀರ್ಣ' ಭಾಗದಲ್ಲಿ ಸೇರಿಸಿದ್ದೇನೆ.

**ಅಂಕಿತ:**

ಹರಸೂರು ಅಣವೀರಪ್ಪ ಶರಣನು ತನ್ನ ಸ್ವರವಚನಗಳೆಲ್ಲವನ್ನು "ಕಲ್ಮಠದ ಗುರು" ಎಂಬ ಅಂಕಿತದಿಂದ ಹಾಡಿರುವನು. ಈ ಕಲ್ಮಠದ ಗುರು, ಹರಸೂರು ಕಲ್ಮಠದ ಗುರುಸ್ಥಲದ ಶಿವಾಚಾರ್ಯರು. ಅಣವೀರಪ್ಪನಿಗೆ ಆತ್ಮಸಾಕ್ಷಾತ್ಕಾರದ ಅರಿವು ಮಾಡಿಕೊಳ್ಳಲು ಕಾರಣರಾದ ಕಾರಣಿಕ ಪುರುಷರು. ಆದುದ್ದರಿಂದ ಅಣವೀರಪ್ಪನು ಗುರುದಕ್ಷಿಣೆಯಾಗಿ ತನ್ನಲ್ಲಿಯ ದುಷ್ಟಗುಣಗಳನ್ನೇ "ಗುರುದಕ್ಷಿಣೆ"ಯಾಗಿ ಅರ್ಪಿಸಲಿಲ್ಲ, ಅದರೊಂದಿಗೆ ತಾನು ಹಾಡಿದ ಸ್ವರವಚನ ಸಂಪತ್ತಿನ ಕಾಣಿಕೆಯನ್ನು ಆ ಗುರುವಿನ ಅಂಕಿತ ಇರಿಸಿಕೊಂಡು,

---

೨. ಹರಸೂರು ಅಣವೀರಪ್ಪನ ಜೀವಿತದ ಕಾಲದಲ್ಲಿ ಅವನ ಗುರುಗಳಾಗಿ ಕಲ್ಮಠದಲ್ಲಿದ್ದ ಶಿವಾಚಾರ್ಯರು ಎರಡನೆಯ ರುದ್ರಮುನಿ ಸ್ವಾಮಿಗಳೆಂಬುದೊಂದು ಹೇಳಿಕೆಯಿದೆ.

ಗುರುಸನ್ನಿಧಿಗೆ ಭಕ್ತಿಭಾವದಿಂದ ಅರ್ಪಿಸಿದ್ದಾನೆ. ಧನ್ಯತೆಯಭಾವವನ್ನು ಅನುಭವಿಸಿದ್ದಾನೆ.[೨] ಏಕೆಂದರೆ ಅಣವೀರಪ್ಪನ ಮೇಲೆ ಗುರುಕರುಣೆಯಾಗದೆ ಹೋಗಿದ್ದರೆ, ಅವನು ಶರಣನಾಗುತ್ತಿರಲಿಲ್ಲ. ಸ್ವರವಚನಕಾರನಾಗಿ ಉಳಿಯುತ್ತಿರಲಿಲ್ಲ. ಗುರು ಕರುಣಸ್ಥಲದಲ್ಲಿ ಬರುವ ಸ್ವರವಚನಗಳೆಲ್ಲವೂ ಪರೋಕ್ಷವಾಗಿ ಕಲ್ಮಠದ ಗುರುವಿನ ಸ್ಮರಣೆ, ಸ್ತುತಿಗಳಾಗಿಯೇ ಇವೆ.

"ಗರಗರ ಗಾಳ್ಯಾಗ
ಗಿರಿಗಿರಿ ತಿರುಗಿದೆನು
ಗುರುರಾಯ ಬಂದ ಬಿಡಿಸಿದನು" (ಗುರುಕರುಣಸ್ಥಲ-ಪದ್ಯ ೩೩)

"ನಾನೇನು ಬಲ್ಲೇನು ಮರುಳ
ಗುರುರಾಯ ತಿಳಿಸಿದ ಈ ತಿರುಳ
ಕಲ್ಮಠದ ಗುರುವಿನ ನುಡಿ ಭಾಳ ಸರಳ
ಶಿವರೂಪವಾಯಿತು ನನ್ನೆಲ್ಲ ಬಾಳಾ" (ಅದೇ ಸ್ಥಲ-ಪದ್ಯ ೨೮)

"ಗುರುರಾಯ ಬಾಯೆಂದು
ಕೈಬೀಸಿ ಕರೆದಾನು
ಗುರುತ್ಹಿಡಿದು ನಾನು ನೋಡಲಿಲ್ಲ
ಆದರೂ ಗುರು ಎನಗ ಬಿಡಲಿಲ್ಲ" (ಅದೇ ಸ್ಥಲ-ಪದ್ಯ ೩೬)

"ಒಳಗಿನಲ್ಲಿ ಬೆಳಗು ತೋರ್‍ಯಾನೋ
ಕಲ್ಮಠದ ಗುರುವು
ಒಳಗ ಎನಗೆ ಬೆಳಗು ಮಾಡ್ಯಾನೋ" (ಅದೇ ಸ್ಥಲ-ಪದ್ಯ ೩೭)

ಈ ಮುಂತಾದ ಪದ್ಯಗಳನ್ನು ಅಣವೀರಪ್ಪನ ಬದುಕಿನ ಹಿನ್ನೆಲೆಯಲ್ಲಿ ನೋಡಿದರೆ, ಮೇಲಿನ ಹೇಳಿಕೆ ಸತ್ಯವಾಗಿ ಕಾಣುತ್ತದೆ. ಆದುದರಿಂದ ಅಣವೀರಪ್ಪನನ್ನು ಆಧ್ಯಾತ್ಮ ಪಥಕ್ಕೆ ಹಚ್ಚಲು ಕಾರಣವಾದ ಗುರುಸ್ಥಲದ ಕಲ್ಮಠವು ಕೆಲವು ಕಾಲ ಸ್ವರವಚನ ರಚನೆಯ ಕಲ್ಮಠವೂ ಆಗಿದೆ.[೩]

## ವಸ್ತು

ಆಧ್ಯಾತ್ಮ ಸಾಧನೆಯ ನೆಲೆಯಲ್ಲಿ ಆತ್ಮ-ಪರಮಾತ್ಮನ ಚಿಂತನೆಯೇ ವಸ್ತುವಾಗಿ ಕಂಡರೂ, ವೀರಶೈವ ಸಾಧನೆಯ ಪಥಗಳಾಗಿರುವ ಅಷ್ಟಾವರಣ, ಷಟ್‌ಸ್ಥಲ ವಿವೇಚನೆ

---

೩. ಹೆಸೂರಿನಲ್ಲಿ ರಂಭಾಪುರಿಪೀಠಕ್ಕೆ ಸಂಬಂಧಿಸಿದ ಕಲ್ಮಠವೆಂಬ ಹೆಸರಿನ ಮಠವು ಇಂದು ಕಾಣಬಹುದಾಗಿದೆ. ಇದು ಬಹಳ ವರುಷಗಳಷ್ಟು ಪ್ರಾಚೀನವಾದ ಮಠವಾಗಿದೆ. ಇದರ ಮೂಲಪುರುಷರು ರುದ್ರಮುನಿ ಶಿವಾಚಾರ್ಯರು. ರೇವಣಸಿದ್ಧರು ಸಂಚಾರ ಕೈಗೊಂಡು ಇಲ್ಲಿಗೆ ಬಂದರೆಂದು ಪ್ರತೀತಿ. ಈ ಮಠದಲ್ಲಿ ಒಂದು ರೇವಣಸಿದ್ಧೇಶ್ವರ ಕೋಣೆಯಿದೆ. ಅಂದು ರೇವಣಸಿದ್ಧರು ಬಂದು ಇದೇ ಕೋಣೆಯಲ್ಲಿದ್ದರೆಂದು ಹೇಳುತ್ತಾರೆ.

ಸ್ವರವಚನಗಳಲ್ಲಿ ಬರುವ ವಸ್ತುವಿನ ಮೂಲ ಸಾರ ಸಾರಾಯವಾಗಿದೆ. ಜಟಿಲವಾದಂತಹ ತತ್ವಸಿದ್ಧಾಂತಗಳನ್ನು ಜನಸಾಮಾನ್ಯರಿಗೂ ತಿಳಿಯುವಂತೆ ಅಣವೀರಪ್ಪ ತಿಳಿಸುತ್ತಾನೆ. ಕೇವಲ ಆಧ್ಯಾತ್ಮ ತತ್ವಸಿದ್ಧಾಂತದ ಗಾಣದ ಸುತ್ತಲೇ ಸುತ್ತುವ ಗಾಣದೆತ್ತಿನಂತೆ ಇವನು ಕಾಣುವುದಿಲ್ಲ. ಅದರಾಚೆಗಿರುವ ವಾಸ್ತವ ಜಗತ್ತಿನ ಪರಿಕಲ್ಪನೆಯೂ ಅಣವೀರಪ್ಪನಲ್ಲಿ ಕಾಣುತ್ತೇವೆ. ಇವನ ಸ್ವರವಚನಗಳ ವಸ್ತುವಿನ ಹರವನ್ನು ಸಂಕ್ಷಿಪ್ತವಾಗಿ ಹೀಗೆ ಸಂಗ್ರಹಿಸಿ ಹೇಳಬಹುದು.

ಆರಂಭದಲ್ಲಿ 'ಕೈಲಾಸವಾಸ' (ಪ್ರಾರ್ಥನಾಸ್ಥಲ-೨)ನಾಗಿ ಕಂಡ ಶಿವನು, ಸಾಧನೆಯು ಮುಂದುವರೆದಂತೆ "ಜೀವನ ಮನದಲಿ ಶಿವನೆನವಿದ್ದರ ಅದುವೆ ನಿಜ ಕೈಲಾಸ. ಅಲ್ಲಿಯೇ ಶಿವವಾಸ" ಎಂಬ ನಿಲವಿಗೆ ಸಾಧಕನು ಬರುತ್ತಾನೆ. ಆತ್ಮದಲ್ಲಿಯೇ ಸ್ಥಿತನಾಗಿರುವ ಶಿವ, ಕೇವಲ ಶಿವನಲ್ಲ, ಅವನು ಶಕ್ತಿ ಸಮೇತನಾಗಿದ್ದಾನೆಂಬುದರ ಸಂಕೇತವೆಂಬುದನ್ನು ಜಗದಂಬೆ ಸರ್ವಮಂಗಳೆಯಾದಿಯರ ಸ್ತುತಿಗಳಲ್ಲಿ ಕಾಣಬಹುದು. ಆತ್ಮ-ಪರಮಾತ್ಮರ ಸ್ವರೂಪ ಅರಿಯುವದಕ್ಕೆ ಜೀವನಿಗೆ ಮಾಯೆ ಅಡ್ಡವಾಗಿದೆ. ಅದು ಜೀವನಿಗೆ ಹಲವಾರು ರೂಪಗಳಲ್ಲಿ ಕಾಣುತ್ತದೆ. ಹೀಗಾಗಿ ಸಂಸಾರದ ಬಂಧನವು ಬಿಗಿಯಾಗುತ್ತದೆ. ಆದುದರಿಂದಲೇ ಕವಿ "ಭಾಳ ಜಪ್ಪಿಸಿ ನಡೀಬೇಕು ತಂಗಿ" ಎಂದು ಎಚ್ಚರಿಸುತ್ತಾನೆ. ಈ ಎಚ್ಚರಿಕೆ ಜೀವನದಲ್ಲಿ ಯಾವಾಗಲೂ ತುಡಿಯುತ್ತಿರಬೇಕು. ಅದಕ್ಕೆ ಗುರುವಿನ ಮಾರ್ಗದರ್ಶನವೂ ಬೇಕು. ಗುರು ಕರುಣೆಯಾದಾಗ, ಅವನು ನೀಡಿವ ಲಿಂಗವು ಕರಸ್ಥಳಕ್ಕೆ ಬರುತ್ತದೆ. "ಇಷ್ಟಾದ ರತುನವಿದು ಗುರು ಇಷ್ಟಪಟ್ಟು ಕೊಟ್ಟಾದ ರತುನ"ವಿದೆಂದು ಸಾಧಕನು ಲಿಂಗಾಂಗ ಸಾಧನೆಗೆ ತೊಡಗಬೇಕಾಗುತ್ತದೆ (ಲಿಂಗಸ್ಥಲ-ಪ.೪೪). ಲಿಂಗದ ಕಲೆ-ನೆಲೆ ತಿಳಿದಂತೆ ಸಾಧಕನಿಗೆ ಜಂಗಮತ್ವದ ದರ್ಶನವಾಗುತ್ತದೆ. ಈ ದರ್ಶನದ ಸಿದ್ಧಿಗೆ ವೀರಶೈವದಲ್ಲಿ ಅಷ್ಟಾವರಣಗಳಾದ ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದಗಳು ಅಂಗವಾಗುತ್ತವೆ. ಈ ಅಂಗಗಳ ಸಂಗದಲ್ಲಿ ಭಕ್ತನಾಗಿ ಮಹೇಶ-ಪ್ರಸಾದಿ-ಪ್ರಾಣಲಿಂಗಿ, ಶರಣ, ಐಕ್ಯನಾಗಿ, ಆ ಪರವಸ್ತುವೇ ತಾನಾಗುತ್ತಾನೆ. ಈ ವಿಚಾರವು ಸ್ವರವಚನಗಳಲ್ಲಿ ಆರಂಭದಿಂದ ಷಟ್‌ಸ್ಥಲದ ವರೆಗೂ ಬೆಳೆಯುತ್ತದೆ.

ವೀರಶೈವಧರ್ಮದಲ್ಲಿ ಆಧ್ಯಾತ್ಮದ ಸಾಧನೆಗೆ ಈ ಲೋಕವೇ ಸಾಧನೆಯ ರಂಗವಾಗಿರುವುದರಿಂದ ವೀರಶೈವಾನುಸಂಧಾನದಿಂದ ಅಣವೀರಪ್ಪನು ಲೌಕಿಕವಾದ ಹಲವಾರು ಉಪಮೆಗಳನ್ನು ಆರಹುತ್ತಾನೆ. ಆ ಮೂಲಕ ಲೌಕಿಕಜ್ಞಾನದ ತಳಹದಿಯನ್ನು, ಆಧ್ಯಾತ್ಮಜ್ಞಾನ ಸಾಧನೆಗೆ ಒದಗಿಸುತ್ತಾನೆ. ಎಲ್ಲ ಧರ್ಮಗಳಲ್ಲಿ ಈ ಶರಣನಿಗೆ ಮಾನವ ಧರ್ಮವು ಹಿರಿದಾಗಿ ಕಾಣುತ್ತದೆ.

"ಮಾನವ ಧರ್ಮವು
ಮರೆಯಲು ಬಾರದೆಂದು
ಅದು ಬಲು ದೊಡ್ಡದು ಜಗದಲಿ" (ಸಂಕೀರ್ಣ- ಪ. ೭೮)

ಎಂದು ತಿಳಿಸುತ್ತಾನೆ.

"ನಿನ್ನಂತೆ ಪರರ ತಿಳಿದು
ನಾ-ನೀನೆಂಬ ಭೇದವ ಅಳಿದು
ಎಲ್ಲರೂ ಕೂಡಿ ಬಾಳುತಲಿ ಏಕಾಗಿ
ಇರಬೇಕು ಜಗದಲಿ ದೀಪದ ಬೆಳಕಾಗಿ" (ಸಂಕೀರ್ಣ- ಪ. ೬೮)

ಇದು ಈ ಶರಣ ಮಾನವಧರ್ಮಕ್ಕೆ ನೀಡುವ ವ್ಯಾಖ್ಯೆಯಂತಿದೆ. ಸರ್ವದಯಾಪಾರಿಯಾದ ಅಣವೀರಪ್ಪ 'ಕುಲ'ದ ಬಗೆಗೆ ಸಿಡಿಮಿಡಿಗೊಳ್ಳುತ್ತಾನೆ:

"ಜಾತಿ-ಜಾತಿ ಅಂತ ಹೇತಿ
ಮನುಷ್ಯಾರ ಮ್ಯಾಲಂತೂ ಇನಿತಿಲ್ಲ ಪ್ರೀತಿ
ಎಲ್ಲಾರೂ ಶಿವನಿಗೆ ಪ್ರೀತಿ
ಹೀಂಗ ಹೇಳ್ಯಾನ ಕಲ್ಮಠದ ಗುರುಪ್ರಖ್ಯಾತಿ" (ಸಂಕೀರ್ಣ- ಪ. ೬೯)

ಎಂದು ಬುದ್ಧಿ ಹೇಳುತ್ತಾನೆ. ಶ್ರೀಮಂತಿಕೆಯಿಂದ ಕೊಬ್ಬಿ ಕುಣಿದಾಡುವವರನ್ನು ಕಂಡು

"ಸಿರಿವಂತಿಕೆ ಬಂದರ
ಕುಣಿದಾಡುತಿ ಯಾಕೆ?
ಸ್ಥಿರವಲ್ಲ ಅದು ತಿಳಿ ಮನುಜಾ" (ಸಂಕೀರ್ಣ- ಪ. ೭೦)

ಎಂದು ತಿಳಿಸಿ ಹೇಳುತ್ತಾನೆ.

**ಸಂದರ್ಭದ ಹಾಡುಗಳು:**

ಅಣವೀರಪ್ಪ ತನ್ನ ಬದುಕಿನ ಕೆಲವು ಸಂದರ್ಭಗಳಿಂದ ಸ್ಫೂರ್ತಿ ಪಡೆದು ಸ್ವರವಚನಗಳನ್ನು ನುಡಿದಿರುವಂತೆ ಸಂಭಾವಿಸಬಹುದಾಗಿದೆ. ಗುರುವಿಗೆ ಗುರುದಕ್ಷಿಣೆಯಾಗಿ ತನ್ನ ದುರ್ಗುಣಗಳನ್ನು ನೀಡಿದ ಸಂದರ್ಭದಲ್ಲಿ ಅಣವೀರಪ್ಪ ಇಂತು ನುಡಿದಿರಬಹುದಾಗಿದೆ:

"ಗುರುಕೊಟ್ಟ ಶಿಕ್ಷ್ಯಾಕ
ನಂದೇನು ದಕ್ಷಿಣ
ಧನವಲ್ಲ ನನ್ನ ದುರ್ಗುಣವ ||ಪ||

..............................................
ಕಲ್ಮಠದ ಗುರುದೇವ ಒಳಬಂದು ಕರೆದಾನು
ಧನ ಬೇಡ, ಬಂಗಾರ ಬೇಡೆಂದು ಒರೆದಾನು
ದುಷ್ಟಗುಣಗಳ ಭಿಕ್ಷೆ ನೀಡೆಂದು ಕೇಳ್ಯಾನು
ಅದು ಕೊಂಡು ನನಗೆತ್ತಿ ಮುದ್ದು ತಾ ಮಾಡ್ಯಾನು"|| (ಸಂಕೀರ್ಣ- ಪ. ೪೧)

ಅಣವೀರಪ್ಪ ಕೈಕೊಂಡ ಬೆಲ್ಲದ ವ್ಯಾಪಾರ ಕುರಿತಂತೆ ಈ ಹಾಡು ಅವನು ಹಾಡಿದಂತಿದೆ.

"ಬೆಲ್ಲದ ವ್ಯಾಪಾರ ಏನಗಾಯ್ತು
ಬಲ್ಲಿದರಿಗದು ಭಲೆ ತಿಳಿದ್ಹೋಯ್ತು ||ಪ||

ಸೋಳಾ ಮಣದ ಶೆಟ್ಟಿ
ಚೌದಾ ಮಣವ ನೀ ಕೊಟ್ಟಿ
ಬದಿಯ ಜನರಿಗದು ತಿಳಿಲಿಲ್ಲ ಗಟ್ಟಿ
ಮುದದಿ ಕೊಟ್ಟು ಸರಿ ತೂಕ ಶಿವಶೆಟ್ಟಿ||
......................................"|| (ಸಂಕೀರ್ಣ- ಪ. ೮೮)

ಹೀಗೆಯೇ ಅಲ್ಲಲ್ಲಿ ಗಮನಿಸಿದರೆ ಇಂತಹ ಹಾಡುಗಳು ಗುರುತಿಸುವುದಕ್ಕೆ ಸಾಧ್ಯವಿದೆ.

ವಿಡಂಬನೆ:

ಶರಣಪರಂಪರೆಗೆ ಅನಾಚಾರ ಅವಿಚಾರ, ಡಂಭಾಚಾರಾದಿಗಳು ಸಲ್ಲದ ನಡತೆ. ಆದುದರಿಂದ ಶರಣ ಅಣವೀರಪ್ಪ ಅಂತಹವುಗಳನ್ನು ಕಂಡಲ್ಲಿ ಕೆಂಡವಾಗುತ್ತಾನೆ. ನೇರ ನಿಷ್ಠುರ ನುಡಿಗಳಿಂದ ಅಂಥವರನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ.

"ಕಪಟ ಗುಣಗಳು ಹೊಟ್ಟೆಯಲ್ಲಿಟ್ಟುಕೊಂಡು
ಪಿಟಿ ಪಿಟಿ ನುಡಿದರೆ ಏನುಂಟು?" (ಸಂಕೀರ್ಣ- ಪ. ೭೧)

ಎಂದು ಕೇಳುತ್ತಾನೆ- ಕಪಟಮಂತ್ರ ಪಾಠಕರನ್ನು ಕುರಿತು.

"ಬಾಯಲ್ಲಿ ತಾಯೆಂದು
ಕಾಮಿಸಿದವ ಹೊಲೆಯ
ಕೈಬಿಟ್ಟು ಘಾತುಕವ
ಮಾಡಿದವ ಹೊಲೆಯ" (ಸಂಕೀರ್ಣ- ಪ. ೭೮)

ಎಂದು ಒಳಗೊಂದು-ಹೊರಗೊಂದು ತೋರುವವರನ್ನು ಹಳಿಯುತ್ತಾನೆ.

ಡಂಭಾಚಾರಗಳನ್ನು ಕುರಿತು ಹೇಳುವ ನುಡಿ ಇನ್ನು ಕಠೋರವಾಗಿದೆ:

"ಮೂರ್ಹೊತ್ತು ಹೊರಗ ತೊಳಿತಾನ
ಒಳಗ ಗಬ್ಬೆದ್ದು ನಾರುತಾನ
ಬಾಯಲ್ಲಿ ವೇದಾಂತ
ಮನದೊಳಗ ಕತ್ತರಿಘಾತ" (ಸಂಕೀರ್ಣ- ಪ. ೭೫)

ಇಂತಹ ಹಲವಾರು ಕಟುನುಡಿಗಳು ಸ್ವರವಚನಗಳಲ್ಲಿ ಕಾಣಸಿಕೊಳ್ಳುತ್ತವೆ.

**ತತ್ವ-ನೀತಿ:**

ಆಣವೀರಪ್ಪನ ಹೆಚ್ಚಿನ ಸ್ವರವಚನಗಳು ಅಷ್ಟಾವರಣ-ಷಟ್‌ಸ್ಥಲಾದಿ ಸಿದ್ಧಾಂತಗಳಿಗೆ ಸಂಬಂಧಿಸಿದಂತೆ ಸಿಕ್ಕುವುದರಿಂದ ಅವುಗಳೆಲ್ಲ ತತ್ವಬೋಧಕ ಪದಗಳಾಗಿಯೇ ಕಾಣುತ್ತವೆ. ಹಾಗೆಯೇ ಅಲ್ಲಲ್ಲಿ ನೀತಿಯ ಬೋಧನೆಯು ಕಾಣಿಸಿಕೊಳ್ಳುವುದುಂಟು.

"ಸತ್ಯದ ಮಾತಾಡು
ಸತ್ಯದ ಹಾದಿ ಕೂಡು
ಸತ್ಯದಲಿ ಜೀವನವ ಮಾಡು
ಆದರಲಿ ಶಿವನನು ಹುಡುಕು" (ಸಂಕೀರ್ಣ- ಪ. ೭೭)

"ನಿಂದೆಗಿಂತ ಹಿರಿದು ಪಾಪವಿಲ್ಲ ಮನದಲಿ
ನಿಂದೆಗಿಂತ ಕೆಟ್ಟ ಕರ್ಮವಿಲ್ಲ
ನಿಂದೆಗಿಂತ ಕೀಳಲ್ಲ ಜಗದಲಿ
................................" (ಸಂಕೀರ್ಣ- ಪ. ೭೮)

"ಅರುವಿನ ಕಡ್ಡಿ ಕೊರೆದು
ದೀಪ ಹಚ್ಚಣ್ಣಾ
ಮರುವನ್ನು ಮರೆತು
ಅರಿಯೋ ಹುಚ್ಚಣ್ಣಾ" (ಸಂಕೀರ್ಣ- ಪ. ೮೧)

ಹೀಗೆ ಆಣವೀರಪ್ಪನ ಸ್ವರವಚನಗಳ ವಸ್ತು, ಮೇಲಿನ ವಿಷಯಗಳೆಲ್ಲವನ್ನು ತನ್ನ ತೆಕ್ಕೆಗೆ ಒಗ್ಗಿಸಿಕೊಂಡಿರುವುದು.

**ಸಾಹಿತ್ಯಮೌಲ್ಯ:**

ಸ್ವರವಚನಗಳಲ್ಲಿ ಸಾಹಿತ್ಯಿಕ ಮೌಲ್ಯ ಅತ್ಯಂತ ಕಡಿಮೆಯಾಗಿ ಕಾಣುತ್ತೇವೆ. ಏಕೆಂದರೆ ಉಳಿದ ಸ್ವರವಚನಕಾರರಂತೆಯೇ ಆಣವೀರಪ್ಪನು ತಾನು ಸಾಹಿತಿಯಾಗಬೇಕೆಂಬ ಹಂಬಲದಿಂದ ಈ ಸ್ವರವಚನಗಳನ್ನು ಹಾಡಲಿಲ್ಲ. ಆದುದರಿಂದ ಇಲ್ಲಿ ಕಟ್ಟುನಿಟ್ಟಾಗಿ ಸಾಹಿತ್ಯಕ ಮೌಲ್ಯಗಳನ್ನು ಹುಡುಕುವುದು ಸರಿಯಲ್ಲ. ಆದರೂ ಸ್ವರವಚನಗಳನ್ನು ಅವಲೋಕಿಸುತ್ತ ನಡೆದಂತೆ ಕೆಲವು ಸಾಹಿತ್ಯಕ ಅಂಶಗಳು ಅಲ್ಲಲ್ಲಿ ಮಿಂಚುತ್ತವೆ.

**ಪ್ರತಿಮೆಗಳು:**

ಆಣವೀರಪ್ಪ ಹೆಚ್ಚಾಗಿ ಪ್ರತಿಮಾ ಭಾಷೆಯಲ್ಲಿ ನಮ್ಮೊಡನೆ ಮಾತನಾಡುವಂತೆ ಕಾಣುತ್ತದೆ. ಮಾಯೆಯನ್ನು ಕುರಿತು ಮಾತನಾಡುವಾಗ ಅದಕ್ಕೆ ಹಲವಾರು ಪ್ರತಿಮೆಗಳನ್ನು ಕವಿ ಕೊಡುತ್ತಾನೆ. ಎಂಟುಮಕ್ಕಳ ತಾಯಿ, ಭಗಭಗಿಸುವ ಬೆಂಕಿ, ವೈಯ್ಯಾರದ ಹೆಣ್ಣು, ಜಾಲಿಮುಳ್ಳು, ಹಾಳುಬಾವಿ, ಈ ಮುಂತಾದ ಪ್ರತಿಮೆಗಳ ರೂಪದಲ್ಲಿ ಮಾಯೆಯ ವಿವರಣೆ ಕಾಣಿಸಿಕೊಳ್ಳುತ್ತದೆ. ಒಂದು ಪದ್ಯವನ್ನಿಲ್ಲಿ ಉದಾಹರಣೆಗಾಗಿ ನೋಡಬಹುದು.

"ಕಾಡಕತ್ತಲೆಯಲ್ಲಿ ನಾನು
ಕಣ್ಣಗಾಣದೆ ಹೋಗುತ್ತಿದ್ದೆನು
ಕಂಟಿ ತಟ್ಟಿ ಕೆಳಗೆ ಬೀಳಲು
ಊರಿತಕ್ಕ ಜಾಲಿಮುಳ್ಳ||  (ಮಾಯೆ-ಮಾಯಾವಿಡಂಬನ ಸ್ಥಲ ಪ. ೧೪)

ಹಾಗೆಯೇ ಕಾಳಕತ್ತಲಿ, ಹೀನನಾಯಿ, ಬೆರಕಿ ನಾಯಿ, ಮೂಬಣ್ಣದರವಿ, ರತ್ನ ಈ ಎಲ್ಲ ಸ್ವರವಚನಗಳು ಪ್ರತಿಮಾ ರೀತಿಯಿಂದಲೇ ಹಾಡಲಾಗಿವೆ.

ಅಲಂಕಾರಗಳು:

ಬಹಳ ಕ್ವಚಿತ್ತಾಗಿ ಅಲಂಕಾರಗಳು ಹೊಳೆಯುತ್ತವೆ. ಕಣ್ಣಿಟ್ಟು ಹುಡಕಬೇಕಾಗುತ್ತದೆ. ಬಳಕೆಗೊಂಡಿರುವ ಅಲಂಕಾರಗಳು ಭಾವ-ಅರ್ಥಪುಷ್ಟಿಯನ್ನುಂಟುಮಾಡುವಲ್ಲಿ ಸಹಾಯಕವಾಗುತ್ತವೆ.

"ಕೊಡ್ಡಿನಂತಿದ್ದ ನಾಲಗೆ" (ಪ್ರಾರ್ಥನಾಸ್ಥಲ-ಪ. ೬) "ಕಾಳನಿದ್ದೆ ಮಂಜ" (ಮಾಯೆ-ಮಾಯಾವಿಡಂಬನಸ್ಥಲ-ಪ. ೧೯) "ಸಂಸಾರದ ಹೊಟ್ಟೆನಾಗ" (ಸಂಸಾರ ಹೇಯಸ್ಥಲ-ಪ. ೨೧), ದೇಹದ ಮನಿ (ಜೀವಸಂಬೋಧನಸ್ಥಲ-ಪ. ೨೬) "ಸ್ಥೂಲ-ಸೂಕ್ಷ್ಮ-ಕಾರಣದಾರವ" (ಜೀವಸಂಬೋಧನಸ್ಥಲ-ಪ. ೨೯) 'ದೇಹದ ಅಂಗಿ' (ಆತ್ಮಸ್ಥಲ-ಪ. ೩೦), ಹೀಗೆ ಕೆಲವು ಅಲಂಕಾರಗಳನ್ನು ಪಟ್ಟಿಮಾಡಬಹುದಾಗಿದೆ.

ಭಾಷೆ:

ಇಲ್ಲಿನ ಸ್ವರವಚನಗಳ ಭಾಷೆ ಸರಳವಾಗಿದೆ, ಸುಂದರವಾಗಿದೆ. ಆದರೆ ಕೆಲವೆಡೆ ಬಹಳ ಆಡುಮಾತಿನ ಜಾಡು ಅನುಸರಿಸಿ ಬಂದರೆ, ಮತ್ತೆ ಕೆಲವು ಸಂದರ್ಭಗಳಲ್ಲಿ ಶಿಷ್ಟ ಭಾಷೆಯ ನಯ ನಾಜೂಕುಗಳನ್ನು ಅದು ಪಡೆದಂತೆ ಕಾಣುತ್ತದೆ. ಆಡುಮಾತಿಗೊಂದು ಉದಾಹರಣೆ:

"ನೆಲದ ಮ್ಯಾಲ ಬಿದ್ದ ನೀರಾ
ಮ್ಯಾಲಿಂದ ಕೆಳಗ ಹರಿ ಪೂರಾ
ಗೊಳ್‌ಗೊಳ ಗೊಳ ಧನಿ ಜೋರಾ
ಸೇರುತಾದ ಹರಿದ್ಹೋಗಿ ಸಾಗರ"  (ಜೀವಸಂಬೋಧನಸ್ಥಲ- ಪ. ೨೮)

ಇದೇ ರೀತಿ ಶಿಷ್ಟಭಾಷೆಗೂ ಒಂದು ಉದಾಹರಣೆ:

"ಜಗದ ಅಯ್ಯ ಜಗದ ಐಕ್ಯ
ಜಗದ ಭರಿತ, ಜಗದ ಚರಿತ
ಜಗದ ಜೀವಕೆ ಜ್ಞಾನ ಜ್ಯೋತಿ
ಅಂಥ ಜಂಗಮನಾಗಬೇಕಣ್ಣ"  (ಜಂಗಮಸ್ಥಲ-ಪ. ೫೧)

ಆಡುನುಡಿಗಳ ಸೊಬಗಿನಲ್ಲಿ ಈ ನೆಲದ ಮಣ್ಣಿನ ವಾಸನೆ ಮೂಗಿಗೆ ಘಮ್ಮೆಂದು ಬಡಿಯುತ್ತದೆ. ಸಂಶಾನ (ಪ್ರಾರ್ಥನಾ ಸ್ಥಲ ಪ.೨), ಕೊಡ್ನು (ಅದೇ-ಪ. ೬), ಡಿಗ್ಗಿ ಡಿಗ್ಗಿ (ಮಾಯೆ-ಮಾಯಾ ವಿಡಂಬನಸ್ಥಲ-ಪ. ೧೦), ಕೆಡಸ್ಯಾಳಪ್ಪೊ, ನುಂಗ್ಯಾಳಪ್ಪೊ(ಅದೇ-ಪ. ೧೧), ಗಬಗಬ (ಅದೇ-ಪ. ೧೨), ಧಗಧಗ, ಭಗಭಗ(ಅದೇ-ಪ. ೧೨), ಬಾತು, ಗಬ್ಬ ವಾಸನಿ (ಅದೇ-ಪ. ೧೪), ಧುಮಕಿ(ಅದೇ-ಪ. ೧೫), ಮರಮರ(ಅದೇ-ಪ. ೧೬), ಬೆಂಕಿ (ಪ. ೨೦) ಹೊರ್ಲಿ (ಪ. ೨೧) ಕರಕರ ಕಿರಿಕಿರಿ (ಪ. ೨೨) ಲೊಳಲೊಟ್ಟಿ (ಪ. ೨೩) ಹೀಗೆ ಹಲವಾರು ಆಡುನುಡಿಗಳ ಪಟ್ಟಿ ಮಾಡಬಹುದಾಗಿದೆ.

ಅಣವೀರಪ್ಪ ಬದುಕಿದ್ದ ಕಾಲದಲ್ಲಿ ಈ ಪ್ರದೇಶದ ಕನ್ನಡಭಾಷೆಯು ಉರ್ದು-ಮರಾಠಿ ಭಾಷೆಗಳ ದಬ್ಬಾಳಿಕೆಗೆ ಒಳಗಾಗಿತ್ತು. ಹೀಗಿದ್ದಾಗಲೂ ಈ ಕವಿಯ ಸ್ವರವಚನಗಳು ಕನ್ನಡತನವನ್ನು ಕಾಪಾಡಿಕೊಳ್ಳುವಲ್ಲಿ ಅತ್ಯಂತ ಯಶಸ್ವೀಯಾಗಿವೆ ಎನ್ನಬೇಕು. ಏಕೆಂದರೆ ಸ್ವರವಚನಗಳುದ್ದಕ್ಕೂ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಉರ್ದುಪದಗಳು ಸಿಕ್ಕುತ್ತವೆ. ಮರಾಠಿ ಪದಗಳ ಬಳಕೆಯಂತೂ ಕಾಣುವುದೇ ಇಲ್ಲ. ಬಿಲ್‌ಕುಲ್ (ಪ. ೧೩), ಫಾಸೀ (ಪ. ೧೩), ಖೂನಿ (ಪ. ೧೮), ದಫನ (ಪ. ೨೫), ಮೀರ್ಾಸಾಬ (ಪ. ೪೦), ಜತನ;ವತನ (ಪ. ೪೪), ಫಾಜ್ಯಾ (ಪ. ೮೩) ಇವಿಷ್ಟು ಸ್ವರವಚನಗಳಲ್ಲಿ ಸಿಕ್ಕುವ ಒಟ್ಟು ಉರ್ದು ಪದಗಳಾಗಿವೆ. ಒಟ್ಟಾರೆ ಅಣವೀರಪ್ಪನ ಭಾಷೆ-ಶಿಷ್ಟ-ಜನಪದನಿಷ್ಠವಾಗಿದ್ದು ಸರಳವಾಗಿದೆ. ಲಲಿತವಾಗಿದೆ.

**ಸ್ಮರಣೆ:**

ನಾನು ಕ್ರಿ.ಶ. ೧೯೮೫ರಿಂದ ೧೯೯೧ರ ವರೆಗೆ ಹರಸೂರಿನಲ್ಲಿ ಕನ್ನಡ ಅಧ್ಯಾಪಕನಾಗಿ ಸೇವೆ ಸಲ್ಲಿಸಿದ್ದೇನೆ. ಆ ಸಂದರ್ಭದಲ್ಲಿಯೇ ನಾನು ಹರಸೂರಿನ ಬಗೆಗೆ, ಅಲ್ಲಿನ ಶರಣ ನೆಲೆಗಳು, ಸಾಹಿತ್ಯದ ಬಗೆಗೆ ಆಸಕ್ತಿ ತಳೆದು ಸಂಗ್ರಹಕ್ಕೆ ತೊಡಗಿದ್ದುದುಂಟು. ಕಲ್ಮಠದಲ್ಲಿ ಕೆಲವು ಹಸ್ತಪ್ರತಿಗಳಿದ್ದವು. ಅವುಗಳ ಹೊಟ್ಟೆಯಲ್ಲಿ ಬಿಡಿಬಿಡಿಯಾಗಿ ದೊರೆತ ಈ ಸ್ವರವಚನಗಳನ್ನು ಈಗ ಪರಿಷ್ಕರಿಸಿ, ಸಂಗ್ರಹಿಸಿದ್ದೇನೆ. ಹಸ್ತಪ್ರತಿಯನ್ನು ಒದಗಿಸಿಕೊಟ್ಟ ಕಲ್ಮಠದ ಶಿವಾಚಾರ್ಯರಾದ ಶ್ರೀ ರುದ್ರಮುನಿಸ್ವಾಮಿಗಳಿಗೆ ನನ್ನ ನಮಸ್ಕಾರಗಳು. ಈ ಕೃತಿಯನ್ನು ತಮ್ಮ ಶ್ರೀಮಠದ ಪ್ರಕಾಶನದಿಂದ ಪ್ರಕಟಿಸುವುದಾಗಿ ಮೈಸೂರಿನ ಶ್ರೀ ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಆಶೀರ್ವಾದ ಮಾಡಿದ್ದಾರೆ. ಅವರ ಸನ್ನಿಧಿಗೆ ನನ್ನ ಭಕ್ತಿಯ ನಮನಗಳು. ಈ ಕೃತಿಯನ್ನು ನಾಡಿನ ಸುವಿಖ್ಯಾತ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿಯವರು ಅವಲೋಕಿಸಿ, ಪರಿಷ್ಕರಿಸಿ ಪ್ರಕಟಿಸಲು ಪ್ರೋತ್ಸಾಹ ನೀಡಿದ್ದಾರೆ, ಅಷ್ಟೇ ಅಲ್ಲದೆ ಇಂತಹ ಸ್ವರವಚನ ಸಾಹಿತ್ಯದ ಹತ್ತು ಸಂಪುಟಗಳು ಸಂಪಾದಿಸಿ ಕೊಟ್ಟರೂ ಪ್ರಕಟಿಸುವ ವ್ಯವಸ್ಥೆ ಮಾಡುವುದಾಗಿ ಆಶ್ವಾಸನೆ ನೀಡಿ, ಈ ಕಾರ್ಯಕ್ಕೆ ತೊಡಗಲು ಉತ್ತೇಜನ ನೀಡಿದ್ದಾರೆ. ಅವರಿಗೆ ನನ್ನ ಶರಣುಗಳು. ಕಲ್ಮಠದ ಬಗೆಗೆ, ಶರಣ ಹರಸೂರು ಅಣವೀರಪ್ಪನ ಬಗೆಗೆ, ಹಲವಾರು ಮೂಲಗಳಿಂದ ನನಗೆ ಮಾಹಿತಿ ಒದಗಿಸಿ ಕೊಟ್ಟಿರುವ ಹರಸೂರು ಗ್ರಾಮದವರೇ ಆಗಿರುವ ಹಿರಿಯರಾದ ಶ್ರೀ

ಗುರುಪಾದಪ್ಪ ಮಾಸ್ತರ ಕಾಂತಾ, ಶ್ರೀ ಶಿವಶರಣಪ್ಪ ಮಾಸ್ತರ ದುಸುರಿ, ಶ್ರೀ ಶಂಕರಯ್ಯ ಸ್ವಾಮಿ - ಈ ಮಹನೀಯರಿಗೆ ನನ್ನ ಕೃತಜ್ಞತಾಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಕೃತಿಯನ್ನು ಸುಂದರವಾಗಿ ಮುದ್ರಿಸಿದ ಮುದ್ರಣಾಲಯದ ಒಡೆಯರಿಗೂ ಸಿಬ್ಬಂದಿ ವರ್ಗದವರಿಗೂ ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಇಲ್ಲಿನವರೆಗಿನ ನನ್ನ ಈ ಸಾಹಿತ್ಯಕೃಷಿ ಕಾರ್ಯದಲ್ಲಿ ಪ್ರೋತ್ಸಾಹಿಸಿದ, ಪ್ರೋತ್ಸಾಹಿಸುತ್ತಿರುವ ಎಲ್ಲ ಗುರುಹಿರಿಯ ಸನ್ಮಿತ್ರರಿಗೆಲ್ಲ ನನ್ನ ಶರಣು ಶರಣಾರ್ಥಿಗಳು.

ಗುಲ್ಬರ್ಗಾ ವಿಶ್ವವಿದ್ಯಾಲಯ,
ಗುಲ್ಬರ್ಗಾ.

ಎಸ್.ಎಂ. ಹಿರೇಮಠ
ಅಧ್ಯಾಪಕರು

# ಪರಿವಿಡಿ

## ಪ್ರಾರ್ಥನಾ ಸ್ಥಲ

### ೧. ಶಿವ ಎನ್ನಿರಿ

ಶಿವ ಶಿವ ಎನ್ನಿರಿ
ಶಿವ ಶಿವನೆಂದರೆ ಈ ಭವದೂರ
ಶಿವನೆಂದರೆ ಈ ಭವದೂರ ||ಪ||

ಜೀವನ ಮನದಲಿ
ಶಿವ ನೆನವಿದ್ದರ
ಆದುವೆ ನಿಜ ಕೈಲಾಸ
ಅಲ್ಲಿಯೆ ಶಿವನ ವಾಸ ||೧||

ಮನುಜನ ನಾಲಿಗೆ
ಶಿವನುಡಿ ನುಡಿದರ
ಆದುವೆ ಪುಣ್ಯ ನಿವಾಸ
ಅಲ್ಲಿಯೆ ಅಭವನ ವಾಸ ||೨||

ಜೀವಗ ಶಿವನು ದೂರಿಲ್ಲ
ನೆನಿಯದೆ ಹೋದರ ಸಿಗನಲ್ಲ
ನಂಬಿಗಿ ಇಟ್ಟು ಕಲ್ಮಠದ ಗುರುವಿಗೆ
ನೆನದರ ಮನದಲಿ ಇಹನಲ್ಲ ||೩||

### ೨. ಭೋಗಿಭೂಷ

ಕೈಲಾಸಪುರವಾಸ ಭೋಗಿಭೂಷ
ಶರಣಯ್ಯ ನಿನಗ ಶರಣು ಶರಣು ||ಪ||

ಜಡಿಯಲ್ಲಿ ಗಂಗಾನ ಧರಿಸಿದವನು ನೀ
ತೊಡೆಯಲ್ಲಿ ಅಂಬಾನ ಇರಿಸಿಕೊಂಡವನು ನೀ
ಶರಣು ಶರಣಯ್ಯ ನಿನಗ ಶರಣು ||೧||

ಮೈಗೆಲ್ಲ ವಿಭೂತಿ ಹಚ್ಚಿಕೊಂಡವನು
ಆನೆಯ ತೊಗಲವನು ಉಟ್ಟುಕೊಂಡವನು
ಶರಣು ಶರಣಯ್ಯ ನಿನಗ ಶರಣು ||೨||

ಸಂಶಾನದಲಿ ಹೊಕ್ಕು ಭೂತಗಳ ಕರೆದವನು
ಭೀತಿ ಬಿಡುಸೋ ಭೂತನಾಥ ನೀನು
ಶರಣು ಶರಣಯ್ಯ ನಿನಗ ಶರಣು ||೩||

ಹಣೆಯಲ್ಲಿ ಉರಿಗಣ್ಣ ತುಳಕಿಸಬೇಡ,
ಕೊರಳಿನ ಹಾವನು ಹರಿಬಿಡಲುಬೇಡ,
ಕಲ್ಮಠದ ಗುರುವೇ ಶರಣು ಶರಣು ||೪||

೩. ಓ! ಜಗದಂಬೆ

ಓ! ಜಗದಂಬಾ
ನೀ ಜಗದ ತಾಯಿ
ನೀಡು ನನಗ ವರವ
ಓ ಕರುಣಾಮಾಯಿ ||ಪ||

ಪರಶಿವನ ಅರ್ಧಾಂಗಿ
ಪರಾರ್ಥ ಶಕ್ತಿ ನೀನು
ಪರತರ ತತ್ವಕೆ ನೀ ಮೂಲ ತಾಯಿ
ನೀಡೆನಗ ವರವ
ಓ ಕರುಣಾಮಯಿ ||೧||

ಲೋಕರಕ್ಷಕಿ ನೀನು
ದುಷ್ಟಶಿಕ್ಷಕಿ ನೀನು
ಮಹಾತಾಯಿ ಮಾದೇವಿ
ಧರೆಯ ಮಾಯಿ ||೨||

ಕಾಲಹರೆ, ಕರ್ಮಹರೆ
ದುರಿತಹರೆ ದುಷ್ಟಹರೆ
ದುರ್ಜನ ನಿರ್ಜನ
ಓ! ತಾಯಿ ಜಗದಂಬೆ ||೩||

ವರವ ನೀಡು ಎನಗ
ಕಲ್ಮಠದ ಗುರುವಿನ ಮಗ
ಬೇಡುವೆ ತಾಯಿ ನಿನಗ
ಓ! ಜಗದ ತಾಯಿ ||೪||

## ೪. ಸರ್ವಮಂಗಳೆ

ಸರ್ವಮಂಗಳೆ
ಮಂಗಳದ ದಾಯಿನಿಯೆ
ಲೋಕದವರಿಗೆ ಮಂಗಳವ ಮಾಡು ||ಪ||

ಶುಭದಾಯಿನಿ
ಕಲ್ಯಾಣಪ್ರದಾಯಿನಿ
ಸರ್ವಮಂಗಳ ತಾಯಿ
ಮಂಗಳವ ಮಾಡು ||೧||

ಮಂಗಳೆ ಜಗಮಂಗಳೆ
ಮನಮಂಗಳೆ ಸಕಲಮಂಗಳದಾಯಿ
ಸರ್ವಮಂಗಳ ತಾಯಿ
ತೋರು ಮಂಗಳವ ||೨||

ಸರ್ವಮಂಗಳ ದೇವಿ
ಸರ್ವಜಗ ಜೀವರಿಗೆ
ಸರ್ವಮಂಗಳ ಸೊಬಗ ನೀಡು
ಸರ್ವ ಕಲ್ಯಾಣ ಮಾಡು ||೩||

ವರಗುರು ಕಲ್ಮಠದ ಗುರುವಿನ ಮಗ ನಾನು
ಬೇಡುವೆನು ಕಲ್ಯಾಣಿ
ಅಭಯ ನೀಡು, ಭಯುವ ದೂಡು
ಸರ್ವಮಂಗಳ ತಾಯಿ ||೪||

## ೫. ಶಾರದೆ

ಶಾರದಾ ಸದ್ಗುಣಿ
ಸುವಿದ್ಯದ ಖಣಿ
ನಲಿದೊಲಿದು ನರ್ತಿಸು
ನಾಲಗೆಯ ಮ್ಯಾಲೆ ||ಪ||

ಕರದಲ್ಲಿ ವೀಣೆಯನು
ಹಿಡಿದವಳು ನೀನು
ಬೊಮ್ಮನ ರಾಣಿ ನೀನು
ವೀಣಾಪಾಣಿ ||೧||

ಎಲ್ಲ ಶಾಸ್ತ್ರಕೆ ನೀನು
ಆದಿದೇವತೆಯಾಗಿ
ವಿದ್ಯೆ ಮೊದಲಿಗೆ
ನಿನ್ನ ವಂದಿಸುವರು ||೨||

ನರಕಪಿ ನಾನು
ಹಾಡುವ ಹಾಡಿಗೆ
ದನಿ ನೀಡಿ ಕಾಪಾಡು ||೩||

ನಿನ್ನ ವರದ ಹಸ್ತವು
ನನ್ನ ತಲೆ ಮೇಲಿರಲಿ
ಕಲ್ಮಠದ ಗುರುವಿನ
ಕರುಣೆ ಎನಗಿರಲಿ ||೪||

೬. ವಾಣಿ

ಕೊಡ್ಡಿನಂತಿದ್ದ ನಾಲಗೆ
ತಿದ್ದಿ ತೀಡಿದ ತಾಯಿ
ಹಾಡಿಸಿದಿ ತತ್ವದ ಹಾದಿಯ ಹಾಡು ||ಪ||

ನಾನು ನುಡಿಯುತಲಿದ್ದ ತೊದಲನುಡಿ ಕೂಡಿಸಿ
ಹಾಡು-ಹಾಡಾಗಿಸಿದ ವಾಣಿ ನೀನು ತಾಯಿ
ವೀಣೆಯಂದದಿ ನುಡಿಸಿದೆ,
ಭಕ್ತಜನರನು ತಣಿಸಿದೆ ||೧||

ನಿನ್ನ ಕರುಣೆಯ ಕಂದಾ
ನಿನ್ನ ಕಣ್ಣಿನ ಬೆಳಕು
ನಾನಾಗುವ ಹಂಬಲವು
ಮನದಲಿಹುದು ||೨||

ನಿನ್ನ ಪದತಲದಲ್ಲಿ
ನಾನಿರಲು ಓ ತಾಯಿ
ಕಲ್ಮಠದ ಗುರು ತಾನು
ನಲಿವನು ನೋಡಮ್ಮ ||೩||

೭. ಗಣಪ

ನಮೋ ಏಕದಂತಾ
ಓ ಗಣಪಾ ||ಪ||

ವಿಘ್ನಹರ
ಆತಂಕ ವಿದೂರ
ನಮೋ ಏಕದಂತಾ
ಓ ಗಣಪಾ ||೧||

ಪಾರ್ವತಿಗೆ ಮಗನು ನೀ
ಪರಶಿವಗೆ ಪ್ರೀತನು
ನಮೋ ಏಕದಂತಾ
ಓ ಗಣಪಾ ||೨||

ಲಂಬೋದರ ನೀ
ಮೂಷಕವಾಹನನು
ನಮೋ ಏಕದಂತಾ
ಹೇ ಗಣಪಾ ||೩||

ನೀಡು ನೀ ಫಲವ
ಕಲ್ಮಶದ ಗುರುವ
ಬೇಡುವೆ ದಯವ
ಹೇ ಗಣಪಾ ||೪||

೮. ಗಜಮುಖ

ಮೊದಲ ನೆನೆವೆನು
ಮುದಗಜಮುಖಿಗ
ಮೋದಕ ನೇವಿದ್ಯಪ್ರಿಯನಿಗ ||ಪ||

ಹರಗೆ ಐದು ಸುತ್ತಾಹ್ಹಿಕಿ
ವರ ಪಡೆದು ಗೆದ್ದವಗ
ಗಜಾಸುರ ಹರಗ, ಗಜಮುಖಿಗ ||೧||

ಚಂದಿರಗ ಕುಂದಿಸಿ
ಚಂದದ ಜಗಕ್ಕೆಲ್ಲ
ಕುಂದದ ಸುಖ ನೀಡೂ ಗಣಪನಿಗ ||೨||

ಡೊಳ್ಳೊಟ್ಟೆ ಒಜ್ಜೆಯ
ಇಲಿಯ ಮ್ಯಾಲ ಹಾಕುತ
ಆದಕ್ಕೊರುವ ಶಕ್ತಿಯ ನೀಡಿದವಗ ||೩||

ಶಿವನಿಗಿ ಶಿವೆಯಳಿಗಿ
ಮುದದ ಕಂದನು ಆಗಿ
ಕಲ್ಮಠದ ಗುರುವಿಗಿ ಒಲಿದವಗ ||೪||

## ಮಾಯೆ-ಮಾಯಾವಿಡಂಬನಸ್ಥಲ

೯. ಮಾಯೆಯ ಲೀಲೆ

ಮಾಯಾ ಲೀಲೆಯ ಮರುಳಾಟ
ನರಜೀವಗಿದು ಅರಿಯದಾಟ ||ಪ||

ಕತ್ತಲಲಿ ಕಂಬ
ಕಳ್ಳಂತೆ ಕಾಂಬುದು
ಮಾಯಾ ಲೀಲೆಯ ಮರುಳಾಟ ||೧||

ಕುರುಡನಿಗೆ ಆನೀ ಕಿವಿ
ಮರದಂತೆ ಕಾಂಬುದು
ಮಾಯಾ ಲೀಲೆಯ ಮರುಳಾಟ ||೨||

ವಿಷದ ಅಸನವೆಲ್ಲ
ರುಚಿಯಾಗಿ ತೋರುವುದು
ಮಾಯಾ ಲೀಲೆಯ ಮರುಳಾಟ ||೩||

ಆವನಿದ್ದು ನನ್ನಲ್ಲಿ
ನಾನಾಗೆ ಕಾಣುವುದು
ಮಾಯಾ ಲೀಲೆಯ ಮಂಗಾಟ ||೪||

ಕಲ್ಮಠದ ಗುರು ತಾನು ಕಣ್ಣೆದುರು ಇರುತಿರಲು
ಅತ್ತಿತ್ತ ಹುಡುಕಿಸುವುದು
ಮಾಯಾಲೀಲೆಯ ಮರುಳಾಟ ||೫||

## ೧೦. ಇದಿಮಾಯೆ

ಮಾಯಿಯ ಮರ್ಮವ ಅರಿತವರು ಹೇಳಿರಿ
ತಿಳಿದೆನೆಂಬುದು ಬರೀ ಸುಳ್ಳಾಯ್ತು ||ಪ||

ತಿಳಿದವರು ತಿಳಿದಷ್ಟು
ತಿಳಿಹೇಳ ಹೊಂಟ್ವರ
ನಾಲಿಗಿ ಕೀಲು ಬಿದ್ಹೋಯ್ತು
ಡಿಗ್ಗಿ ಡಿಗ್ಗಿ ಮಾತಗಳ ಆಡಿದರ
ಮಾತಿಲಿಗಿ ನೆಲಿಯು ಸಿಗದಾಯ್ತು ||೧||

ನಾ ಮುಂದ ತಾ ಮುಂದ
ಎಂದೆಂದು ನುಡಿದವರ
ಬಾಯಿಲಿಗಿ ಬಂಧ್ಬನ
ಬಂದ್ಹೋಯ್ತೋ ತಮ್ಮಾ
ಮಾಯಿಯ ಮರ್ಮ ತಿಳಿದಾಯ್ತು ||೨||

ಬೆಳಕಿಲಿಗಿ ಕತ್ತಲಿ
ಕತ್ತಲ್ಯಾಗ ಕತ್ತಲಿ
ಕಪ್ಪ ಬಣ್ಣದ ಛಾಯಿ ಈ ಮಾಯಿ
ಕಲ್ಮಠದ ಗುರುವಿಗಿ ತಿಳಿದ್ಹೋಯ್ತು ||೩||

## ೧೧. ಎಂಟು ಮಕ್ಕಳ ತಾಯಿ

ಎಂಟು ಮಕ್ಕಳ ತಾಯಿ
ಕುಂಟ ಮಕ್ಕಳ ತಾಯಿ
ಬಾಯಿ ತೆರೆದು ಲೋಕೆಲ್ಲ ನುಂಗ್ಯಾಳಪ್ಪೋ. ||ಪ||

ಒಂದೇ ಒಂದಿದ್ದುದು
ಎಂಟಾಗಿ ಮಾಡ್ಯಾಳು
ಚಂದಾದ ಚಂದ್ಯೆಲ್ಲ
ಕೆಡಸ್ಯಾಳಪ್ಪೋ ||೧||

ಮೂರ ಮಕ್ಕಳ ಹಡ್ದು
ಮೂಲೋಕ ನುಂಗ್ಯಾಳು
ಜಗದ ಜನಕ ಬ್ಯಾನಿ
ತರಸ್ಯಾಳಪ್ಪೋ ಆಕೀ ||೨||

ಆರ ಮಕ್ಕಳ ಹಡ್ದು
ಅಡವ್ಯಾಗ ಹೊಂಟಾಳು
ಕಾಡನಾಡೆನ್ನದೆ
ನಡದಾಳಪ್ಪೋ ಆಕೀ ||೩||

ಸರಸೋತಿ ಇವಳಲ್ಲ
ಮಾಲಕುಮಿ ಮೊದಲಲ್ಲ
ಕಲ್ಮಠದ ಗುರುವಿನ ಗುಲಾಮಪ್ಪೋ
ಎಂಟು ಮಕ್ಕಳ ತಾಯಿ ಇವಳೆಯಪ್ಪೋ ||೪||

೧೨. ಭಗಭಗಿಸುವ ಬೆಂಕಿ

ಭಗ ಭಗ ಬೆಂಕ್ಯಾಗ
ಗಬ ಗಬ ಬೀಳುವ
ಪತಂಗ ನಾವಣ್ಣಾ ||ಪ||

ಕೆಂಪಾಗಿ ಕಣ್ಣು ಕೊರ್ಯೆಸುತಾದ
ಬಂಗಾರ ಬಣ್ಣಾ ಮನ ಸೆಳಿತಾದ
ಭಗಭಗ ಬೆಂಕ್ಯಾಗ
ಗಬಗಬ ಬೀಳುವ ಪತಂಗ ನಾವಣ್ಣಾ ||೧||

ಮೈಗೀ ಹತ್ತೀದ ಗರಮಿ
ಆದು ನರಮ ನರಮ ನರಮ
ಆಗ ತಿಳಿಲಿಲ್ಲೋ ತಮ್ಮಾ, ಧಗ ಧಗ ಬೆಂಕ್ಯಾಗ
ಗಬ ಗಬ ಬೀಳುವ ಪತಂಗ ನಾವಣ್ಣಾ ||೨||

ಕಲ್ಮಠದ ಗುರು ಬಂದಾಗ
ಎದುರಿಸಿ ನಿಂದಾಗ
ಹತ್ತತೇನೋ ಖೂನಾ
ಉಳಿದಿತೇನೋ ಮಾನಾ ||೩||

೧೩. ಒಯ್ಯಾರದ ಹೆಣ್ಣು

ಎಂಥಾ ಒಯ್ಯಾರದ ಹೆಣ್ಣು ನೀ
ಜಗಕಾದಿ ಹುಣ್ಣು ||ಪ||

ಕೈಯ್ಯ ತಿರುವಿದಿ
ಕಣ್ಣು ತಿರುವಿದಿ
ಘುಬ್ಬು ತಿರುವಿದಿ ||೧||

ಅಜವ ನಿಂತಿದಿ
ಗಜವ ನಿಂತಿದಿ
ಗಜಬಜಿಸುತ ನೀ
ಗೆಜ್ಜೆ ಕಟ್ಟಿದಿ ||೨||

ಕೈಯ್ಯವ ಬೀಸಿದಿ
ಸೆರಗವ ಹಾಸಿದಿ
ಮೂಜಗಕ ನೀ
ಮೋಹ ಮಾಡಿದಿ ||೩||

ನಿನ್ನ ಬೆನ್ನಹಿಂದ ಬಿದ್ದವರು ಭಾಳ
ಕಳಿದುಕೊಂಡು ಆದರು ಮನಿ ಹಾಳ
ನೋಡಬಾರದು ಕಣ್ಣಿಂದ ಗೋಳ
ಬಿಲ್‌ಕುಲ್ ನೀ ಜನಕಾದಿ ಕಾಳ ||೪||

ಕಲ್ಮಠದ ಗುರುವಿಗೆ ಕಂಡಿ
ಉಳ್ಳವರಂಗ ಫಾಸೀ ಮಾಡೇನು ಅಂದಿ
ನಡಿಲಿಲ್ಲ ಅಲ್ಲಿ ನಿನ್ನದಾಟ
ಬಯಲಾಯಿತಲ್ಲ ನಿನ್ನ ಮರೆವಿನ ಮಾಟ ||೫||

## ೧೪. ಜಾಲಿಮುಳ್ಳ

ಜಾಲಿಮುಳ್ಳು ಅಕ್ಕಾ ಜಾಲಿಮುಳ್ಳಾ ||ಪ||

ಕಾಡಕತ್ತಲಿಯಲ್ಲಿ ನಾನು
ಕಣ್ಣಗಾಣದೆ ಹೋಗುತ್ತಿದ್ದೆನು
ಕಂಟಿ ತಟ್ಟಿ ಕೆಳಗ ಬೀಳಲು
ಊರಿತಕ್ಕ ಜಾಲಿಮುಳ್ಳ ||೧||

ಕಾಲ ಬಾತು ಕೊಳತು ನಾತು
ಕೀವ ರಕ್ತ ಸೋರುತಿತ್ತ
ಬಾಲ ಹುಳುಗೋಳು ಹೊರಗ ಸೂಸಿ
ಗಬ್ಬು ವಾಸನಿ ಹೊಡೆಯುತಿತ್ತ ||೨||

ಮತ್ತ ಏರಿ ಪಿತ್ತ ಏರಿ
ಮೈಯ್ಯ ಎಲ್ಲ ಉಂಡ ಹೋಯ್ತು
ಒಳಗ ಕಾಣದೆ ಹೊರಗ ಉಳಿದೆನು
ಕಲ್ಮಠದ ಗುರುವನು ಕಾಣದಾದೆನು ||೩||

## ೧೫. ಹಾಳು ಬಾವಿ

ಅಬಬಬ ಎಂಥಾ ಹಾಳಭಾವ್ಯೋ
ತಮ್ಮಾ! ಆರುದ್ದ ಆಳಿಗೂ ನೆಲುಕಾದೋ ||ಪ||

ಹಗಲ ಹೊತ್ತಿನೊಳಗ ಕಂಡದ್ದೊ
ತಮ್ಮಾ! ಇದರ ಮ್ಯಾಲ ಕುಂತು ಉಂಡದ್ದೊ||
ಅಗಲದ ಆಳತೆ ತಿಳಿಯದ್ದೊ
ತಮ್ಮಾ! ಆಳಲಿ ಆಳಲಿ ಬೇಸತ್ತದ್ದೊ ||೧||

ಬಲ್ಲಿದನೆಂದವರು ಬಿದ್ದಾರೋ
ತಮ್ಮಾ! ಒಲ್ಲೆನೆಂದರೂ ಓಡಿಬಂದಾರೋ
ಬಂದು ಬಂದು ಒಳಗ ಬಿದ್ದಾರೋ
ತಮ್ಮಾ! ಬಿರುಮಳಿ ಹೊಡದಂಗ ಬಳಲ್ಯಾರೋ ||೨||

ಮ್ಯಾಲೇರಿ ಬರದಾಂಗ ಮುಳಗ್ಯಾರೋ
ತಮ್ಮಾ! ನೀರಕುಡದು ಘುಮಕಿ ಹೊಡದಾರೋ ||೩||

ಕಲ್ಮಠದ ಗುರುವಿಗಿ ನೆನದಾರೋ
ತಮ್ಮಾ! ಕೂಗಿ ಕೂಗಿ ಅವರು ಕರಿತಾರೋ
'ಮ್ಯಾಲೆತ್ತು ಮ್ಯಾಲೆತ್ತು' ಅಂತಾರೋ
ತಮ್ಮಾ! ಮಾಯಿಗಿ ಸಿಕ್ಕು ಸತ್ತಾರೋ ||೪||

## ೧೬. ಕಾಳಕತ್ತಲಿ

ಕಾಳಕತ್ತಲಿ ಒಳಗ
ಮೇಳ ಇಲ್ಲದೆ ನಾನು||
ತಿರುಗಿ-ತಿರುಗಿದೆನೋ ||ಪ||

ಕಣ್ಣಿನ ಬೆಳಕೆಲ್ಲ ಕಳೆದುದು ಕತ್ತಲಿ
ಕಾಣದೆ ತಿರುಗಿದೆನೋ
ಮರ ಮರ ಮರುಗಿದೆನೋ ||೧||

ಸೂರ್ಯನ ಬೆಳಕಿಗಿ ಮೀರಿದಾ ಕತ್ತಲಿ
ಚಂದ್ರನ ಬೆಳಕನು ನುಂಗಿದ ಕತ್ತಲಿ
ಕಾಣದೆ ತಿರುಗಿದೆನೋ
ತಿರುತಿರುಗಿ ಮರುಗಿದೆನೋ ||೨||

ನನಗೆ ನೀ ಗುರುತಿಲ್ಲ
ನಿನ್ನ ನಾ ಅರಿತಿಲ್ಲ
ಕಾಳ ಕತ್ತಲಿಯೆಲ್ಲ
ಕಲ್ಮಶದ ಗುರುಬಲ್ಲ ||೩||

೧೭. ಅರವಿಯ ಮಾಟ
ಮೂರುಗೇಣಿನ ಅರವಿ
ಅರಿಯರು ಅದರ ಗೊಡವಿ ||ಪ||

ಮೂರುಗೇಣಿನ ಅರವಿ
ಮೂಲೋಕ ಮುಳಗ್ಯಾದ
ಮನು-ಮುನಿ-ಸುರಕೆಲ್ಲ
ಮೂಲ್ಯಾಗ ಒತ್ತ್ಯಾದ ||೧||

ಮಾರುದ್ದ ಹಾರುವರ
ಕಾಲೀಗಿ ತೊಡಕ್ಯಾದ
ಮೇಲುದ್ದ ಜಿಗದವರ
ಕಣ್ಣುಗಳ ಕಟ್ಟ್ಯಾದ ||೨||

ಹರನ ಹುಲಿದೊಗಲಿನಂತೆ
ಟೊಂಕಕ್ಕ ಸುತ್ತ್ಯಾದ
ಹರಿಯ ಹೆಗಲಮ್ಯಾಲ
ಹಾಯಾಗಿ ಮಲಗ್ಯಾದ ||೩||

ಬೊಮ್ಮಗ ಭ್ರಮ ಹಿಡಿಸಿ
ತಲಿ ಕಡಿಸಿ ಹಾಕ್ಯಾದ
ಇಂದರಗ ಮಂದಿರವ
ಬೆದರಿಸಿ ಬಿಡಸ್ಯಾದ ||೪||

ಅರವಿಯ ಮಾಟ
ತಿಳಿಲಿಲ್ಲ ಈಟ
ಕಲ್ಮಶದ ಗುರುವೀಗಿ
ಇದರಿಲ್ಲದ ಆಟ ||೫||

೧೮. ಹೀನ ನಾಯಿ
ನಾಯಿ ಹೊಂಟಾದೋ।ಮನುಜಾ
ನಾಯಿ ಹೊಂಟಾದೋ ||ಪ||

ಹಂಡಭಂಡ ಪುಂಡನಾಯಿ
ಗಂಡು ಅಲ್ಲ; ಹೆಣ್ಣು ನಾಯಿ
ರುಂಡ ಇಲ್ಲದ ಪರಚಂಡ ನಾಯಿ
ಖಂಡುಗ ಖಂಡುಗ ತಿನ್ನುವ ನಾಯಿ ||೧||

ನಾನಾ ಅಂದವಗ ನಿಲಸಿದ ನಾಯಿ
ನೀ ನೀ ಅಂದವಗ ಅಂಜುವ ನಾಯಿ
ಖೂನಿ ನಾಯಿ, ಹೀನ ನಾಯಿ
ಬಾನಿನೊಳಗ ಬಯಲಾದ ನಾಯಿ ||೨||

ನನಗ-ನಿನಗ ತಿಳಿಯದ ನಾಯಿ
ಅವಗ-ಇವಗ ಕಾಣದ ನಾಯಿ
ಜಗದ ಬೆನ್ನ ಹಿಂಧ ಬಿದ್ದಾದ ನಾಯಿ
ನಾಚೀಕೆ ಇಲ್ಲದ ಬಹುರೂಪದ ನಾಯಿ ||೩||

ನಾನಾ ಬಣ್ಣದ ನಾಜೂಕು ನಾಯಿ
ನಾನೇ ಮ್ಯಾಲೆಂದು ಮೆರೆಯುವ ನಾಯಿ
ನಂಬೀಕೆ ಇಲ್ಲದ ಬಲು ಬೆರಕಿ ನಾಯಿ
ಕಲ್ಮಠದ ಗುರುವಿಗಿ ಗುರ್ರೆಂದ ನಾಯಿ ||೪||

## ೧೯. ಕಾಳನಿದ್ದೆ

ಕಾಳನಿದ್ದೆಯ ಕಡಿದು ಕಳೆದೆನೋ
ಕೇಳಪ್ಪ ಜಾಣಾ ||ಪ||

ಮೂಡಣ ದಿಕ್ಕಿನಾಗ ಸೂರ್ಯ ನೆತ್ತಿಗೇರಿದಾಗ
ಬಿಸಲ ಬೆಳಕ ಚೆಲ್ಲಿತ್ತು
ಕಾಳನಿದ್ದೆ ಮಂಜವಿತ್ತು ||೧||

ಕಣ್ಣಬಿಟ್ಟು ಕಣ್ಣ ತೆರೆದ
ಕಾಳನಿದ್ದಿ ಜಗ್ಗುತಿತ್ತು
ಗಪ್ಪನೆಂದು ಎದ್ದು ನಿಂತೆ
ಕಾಳನಿದ್ದೆ ಒದ್ದು ಎದ್ದೆ ||೨||

ಕಾಳನಿದ್ದೆ ಗಾಢದಿಂದ
ತೂಕಡಿಕಿ-ಆಕಡಕಿ
ನನ್ನ ನಾನು ಮರೆತು ಹೋಗಿದ್ದೆನು
ಕಲ್ಮಠದ ಗುರುವಿನಿಂದ ಎಚ್ಚರಾಗಿ ಕಣ್ಣು ತೆರೆದೆ||೩||

## ೨೦. ಬೆರಕಿ ಮಾಯಿ

ನೀ ಎಂಥಾ ಬೆರಕಿ ಮಾಯಿ
ಎಲ್ಲೆಂದರಲ್ಲಿ ನಿನ್ನ ಛಾಯೀ ||ಪ||

ನಾ ನಿಂತಲ್ಲಿ ನೀನು ಬಂದಽರ
ನಾ ಓಡಿದೆನು ಏ ಸುಂದರಿ
ಗುರುರಾಯ ಗಂಟು ಬಿದ್ದ
ಪರದೇಶಿ ನಿನಗ ಒದ್ದ ||೧||

ನೆಳ್ಳ್ಯಾಗಿ ನೀನು ಬೆನ್ನ ಬಿದ್ದರ
ಬೆಳಕಾಗಿ ನಾನು ನಿಂತೀನಿ
ಆ ಥಳಕಿನಾಗ ಕಂಡ ನಿನ್ನನ್ನು
ದೂರ ಸಾಗಿಸಿಬಿಟ್ಟೆನು ಸಾಕಿನ್ನು ||೨||

ನೀ ಎಂಥ ಎಂಥ ಬೆರಕಿ
ನಾ ನಿನ್ನಕ್ಕಿಂತ ಬೆರಕಿ
ಕಲ್ಮಠದ ಗುರುವ
ನೀಡಿದ ನನಗ ವರವ ||೩||

# ಸಂಸಾರಹೇಯಸ್ಥಲ

## ೨೧. ಏನು ಸಾರ್ಥಕ?

ಹುಟ್ಟಿ ಬಂದು ಹೊಟ್ಟಿ ತಿಂದರ
ಏನು ಸಾರ್ಥಕ, ಸಂಸಾರದಲಿ ||ಪ||

ಹುಟ್ಟಿ ಬಂದೀನಂತಿ
ಸಂಸಾರದ ಹರಲಿ ಹೊತ್ತಿ
ಬರಲಾದಿ, ನೀ ಬರಲಾದಿ ||೧||

ಹುಟ್ಟಿ ಬಂದೀನಂತ
ಸಂಸಾರದ ಹೊಟ್ಟಿನಾಗ ಹೊರಳ್ಯಾಡುತ
ಬಡವಾದಿ ನೀ ಬಡವಾದಿ ||೨||

ಹುಟ್ಟಿ ನೀ ಬಂದ ಬಳಿಕ
ಕಲ್ಮಠದ ಗುರುವಿನ ಭಜಿಸದಿದ್ದರ
ಹುಟ್ಟಿ ನೀ ಬಂದುದಕ
ಏನು ಸಾರ್ಥಕ? ||೩||

೨೨. ಭವಭಾರ

ಕರಕರ ಕಿರಿಕಿರಿ ಸಂಸಾರ
ಸುಖ ಕಾಣದಾದರದು ಭವಭಾರ ||ಪ||

ಹೆಂಡತಿ ಮಕ್ಕಳ ಗೋಳಾಟ
ಬಂಧುಬಾಂಧವರ ಹೋರಾಟ
ಅಣ್ಣ-ತಮ್ಮಗಳ ನೆಗೆದಾಟ
ಸುಖವಿಲ್ಲದೀ ಸಂಸಾರ ಭಾರ ||೧||

ಹೊನ್ನಿನ ಆಶೀಗಿ ಹಣಕ್ಕಾಕಿ
ಮಣ್ಣಿನ ಮೋಹಕ ಮನಸೋತಿ
ಹೆಣ್ಣಿನ ರೂಪಕ ಮರುಳಾದಿ
ನಿಜಸುಖ ಕಾಣದೆ ಹಾಳಾದಿ ||೨||

ಎಲ್ಲ ಭಾರ ನಿನ್ನದೆನಬೇಡ
ಅದು ನಡೆಸುವವನು ಬ್ಯಾರೆ ಹನ ನೋಡ
ಕಲ್ಮಠದ ಗುರು ಹನ ಸೂತ್ರಧಾರ
ಅವನೆ ಎಲ್ಲದಕ ಅಧಿಕಾರ ||೩||

೨೩. ಎಲ್ಲ ಲೊಳಲೊಟ್ಟಿ

ಸಂಸಾರ ಎಂಬುದು ಲೊಳಲೊಟ್ಟಿ
ಬಿಟ್ಟು ಹೊಂಡುತಾರೋ ತಮ್ಮಾ ಇದು ಗಟ್ಟಿ ||ಪ||

ಸಂಸಾರ ನಂದು ಅಂತಿ
ಸಂಸಾರ ನಿಂದು ಅಂತಿ
ಎಲ್ಲಾ ನಂದೇ ಅಂತಿ
ಯಮನೂರಿಗೆ ಹೊರಟಾಗ ಇಲ್ಲೆ ಬಿಡುತಿ ||೧||

ಇದ್ದಾಗ ಎಟ್ಟು ವೈಭವದ ಮೋಜು
ಮೃಷ್ಟಾನ್ನ ಉಂಡಷ್ಟು ಹೊಟ್ಟೆಯ ಬೊಜ್ಜು
ಮ್ಯಾಲಿನವ ಕರೆದಾಗ ಪ್ರಪಂಚ ತ್ಯಾಜ್ಯ
ಬಾಯಾಗ ಬಿತ್ತಲ್ಲೊ ಬರಿ ಮಣ್ಣ ಬೊಜ್ಜಾ ||೨||

ಇರುವಾಗ ಕೊಡಲಿಲ್ಲ
ಇರುವಾಗ ಮಾಡಲಿಲ್ಲ
ಕಲ್ಮ್ರತದ ಗುರುವಿನ ತಿಳಿಲಿಲ್ಲ
ಸತ್ತಾಗ ಸಂಸಾರ ಲೊಳಲೊಟ್ಟಿ ಎಲ್ಲ ||೩||

೨೪. ಜಪ್ಪಿಸಿ ನಡೆ

ಭಾಳ ಜಪ್ಪೀಸಿ ನಡೀಬೇಕಾ ತಂಗಿ
ಇದು ಕಾಲ ಜಾರುವ ಬಂಡಿ ||ಪ||

ಹಾಸ-ಹಾವಸಿ ಹರಡ್ಯಾದ
ಇಳಜಾರದ ಕಲ್ಲಾದ ತಂಗಿ
ಇದರ ಮ್ಯಾಲ ನೀ ನಡಿಬೇಕಾ
ಎಚ್ಚರ ತಪ್ಪಿದರ ಹೋದೀತು ಝೋಕಾ ||೧||

ಎಂದಿಗೂ ಒಣಗಲದು
ಹರಿತಾವ ನೀರಾ ಜೋರಾ
ಕೊಳಕು ರಾಡಿಯ ನೀರಾ ಕೂಡ್ಯಾವ ಪೂರಾ
ಜಪ್ಪೀಸಿ ನಡೀಬೇಕಾ ತಂಗಿ ||೨||

ಕೆಳಗುಳ್ಳಿ ಬಿದ್ದ್ವರ ಹಿಡಿವರು ಯಾರಿಲ್ಲ
ಎಡಕ-ಬಲಕಾದರ ಆಸರು ನೆಲಿಯಿಲ್ಲ
ಕಲ್ಮ್ರತದ ಗುರುವಿನ ನೆಲಿ ತಿಳಿಲಿಲ್ಲ
ಈ ಬಂಡೀಯ ಸವಾಸ ಅಳಿಲಿಲ್ಲ ||೩||

೨೫. ಸಂಸಾರ

ಸಂಸಾರದಲಿ ಬಿದ್ದು ಸಂಸಾರ ಮಾಡುತಿ
ಸಂಸಾರದ ನೆಲಿ ತಿಳೀಲಿಲ್ಲಾ ||ಪ||

ಸಂಸಾರ ಎಂಬುದು ಅಡಿಗೆಯ ಕೆಲಸ
ಹದಮಾಡಿ ಅಡಬೇಕಾ ತಂಗೀ
ಉಪ್ಪು-ಖಾರ-ಹುಳಿ ಎಲ್ಲ ರಸವ ಕೂಡಿ
ಸಸಾರ ಮಾಡಬೇಕಾ ತಂಗೀ ||೧||

ಸಾರ ಸಂಸಾರದ ಸುಖವೇನು?
ದೂರ ಸಂಸಾರದ ದುಃಖವೇನು?
ಎರಡ್ವರ ಅಂತ್ವರ ತಿಳಿದು ನೋಡಬೇಕಾ
ಸಂಸಾರದಲಿ ಬಲು ಜ್ವಾಕ್ಯಾಗಿ ಇರಬೇಕಾ ||೨||

ಸಂಸಾರ ಹೊಳಿಯಾಗ ತೇಲುತ ಇರಬೇಕಾ
ಮುಳುಗಿದರಾಯಿತು ದಫನಾ
ಕಮಲದ ಎಲಿಯಂಗ ಮ್ಯಾಲೆ ಇರಬೇಕಾ
ಕಲ್ಮಠದ ಗುರುವಿಗಿ ಅರಿಬೇಕಾ ||೩||

## ಜೀವ ಸಂಬೋಧನ ಸ್ಥಲ

### ೨೭. ಜೀವನಿಗೆ ದೇಹದ ಮನೆ

ಈ ದೇಹದ ಮನಿ ನಿನಗ ಎಟ್ಟು ದಿನದೋ ಜೀವಾ?
ಇದು ಒಂದು ದಿನ ಬೀಳತಾದೋ ||ಪ||

ಕಾಮದ-ಕ್ರೋಧದ ಮನೆಯೋ ಜೀವಾ
ಮೋಹದ-ಮಾಯದ ಮನೆಯೋ ಜೀವಾ
ಹೀನವಾಸನೆಗಳ ಹೆಗ್ಗಣದ ಮನೆಯೋ
ದುರ್ಗುಣಗಳ ಇಲಿ ಕೆದರಿದ ಮನೆಯೋ ||೧||

ಒಂಬತ್ತು ಬಾಗೀಲ ಇದಕೋ ಜೀವಾ
ನೀನು ಯಾವ ಬಾಗೀಲದಿಂದ ಹೊಂಟಿ?
ಒಳಗ ಕುಂತು ನೀ ನೋಡತಲಿರತಿ
ನೀ ಯಾರಿಗೀ ಕಾಣತಿ ಏ ಜೀವ ಗೆಳತಿ? ||೨||

ಯಾರೀಗಿ ಯಾರಿಲ್ಲ ಈ ಮನಿಯಾಗ
ಯಾರೀಗಿ ಮೇಳಿಲ್ಲ ಮನಿಯಾಗ
ಇರುವ ತನಕ ಅವನದು ಇವನದು
ಮನಿ ಉರುಳಿ ಬಿದ್ದಾಗ ಕಲ್ಮಠದ ಗುರುವಿನದು ||೩||

### ೨೮. ಒಂಟಿ ಜೀವ

ನಿನ ಹಿಂದ ಯಾರು ಬರತಾರೋ ಜೀವಾ
ಹೊಂಟೆಲ್ಲೋ ಒಬ್ಬ ಒಂಟಿ ||ಪ||

ಹೋರಾಡಿ ಗಳಿಸಿದ ಭೂಮಿಯು ಬರಲಿಲ್ಲ
ಹಾರಾಡಿ ಗಳಿಸಿದ ಹಣವೇನು ಬರಲಿಲ್ಲ
ಕಟ್ಟಿದ ಕಟ್ಟೆಯ ಮನೆ ಏನೂ ಬರಲಿಲ್ಲ
ಕಟಬಿಟಿ ಜೀವಾ ಹೊಂಟೆಲ್ಲೊ ಒಂಟೀ ||೧||

ಟೊಂಕ್ಯಾಕ ಕಟ್ಟೀದ ಕೀಲಿ ಎಲ್ಲಿಟ್ಟಿ?
ವಸ್ತ್ರ-ವಡವಿ ಅಲ್ಲೆ ಬಿಟ್ಟಿ
ಜರತಾರಿ ಅರಿವಿ-ಅಂಚೂಟಿ ಬರಲಿಲ್ಲ
ಎಲ್ಲವೂ ಬಿಟ್ಟು ಹೊಂಟೆಲ್ಯೋ ಜೀವಾ ||೨||

ಪ್ರೀತಿಯ ಹೆಂಡ್ತಿ ಬರಲಿಲ್ಲ ಹಿಂದ
ಮಮತೆಯ ಮಕ್ಕಳು ಉಳದಾರ ಹಿಂದ
ಬಂಧು-ಬಾಂಧವರೆಲ್ಲ ನಿನಗಲ್ಲ ಜೀವಾ
ಕಲ್ಮಠದ ಗುರುವೊಬ್ಬ ನಿನಗಿರುವನೆಲ್ಲಾ ||೩||

೨೮. ಜೀವ

ನೋಡೋ ನೋಡೋ ನೋಡೋ
ಓಡುತಾದೋ ಬಯಲ ಮಾಡೋ ||ಪ||

ಕೆಳಗಿಂದ ಮ್ಯಾಗ್ಹೋಗಿ
ಮ್ಯಾಲಿಂದ ಕೆಳಗಿಳಿದು
ಮಾಡಿನಂತಿದ್ದು, ಮಡುವಾಯ್ತು
ನೀರಾಯ್ತು ನೀರಿನ ಗೂಡಾಯ್ತು ||೧||

ನೆಲದ ಮ್ಯಾಲೆ ಬಿದ್ದ ನೀರ
ಮ್ಯಾಲಿಂದ ಕೆಳಗ ಹರಿ ಪೂರಾ
ಗೊಳ ಗೊಳ ಗೊಳ ಧನಿ ಜೋರಾ
ಸೇರುತಾದ ಹರಿದ್ಹೋಗಿ ಸಾಗರಾ ||೨||

ಎಲ್ಲಿಂದ ಬಂದಿರುವಿ ಜೀವ?
ಅಲ್ಲಿಯ ನೆಲಿ ತಿಳಿ ಜೀವ
ಅಲ್ಲಿಂದ ಬಂದ್ಯಾರ ಅಲ್ಲಿಗೆ ಹೋಗಬೇಕು
ಕಲ್ಮಠದ ಗುರುವೀಗಿ ಕೇಳಾ ||೩||

೨೯. ಮೂಬಣ್ಣದ ಅರವಿ

ಅರವಿಯ ತೊಳಿಬೇಕೋ ಜೀವಾ
ಮ್ಯಾಲ ಹೊಲಸೆಟ್ಟು ಕುಂತಾದ ಹೇವಾ ||ಪ||

ಅಂಥಿಂಥ ಹಟಗಾರ
ನೇಯ್ದ ಅರವಿಯಲ್ಲ
ಅಂಥಿಂಥ ನೂಲಗಾರ
ನೂತ ಅರವಿಯಲ್ಲ ||೧||

ಝುಳಝುಳ ಹೊರ ಒಳಗ
ನೋಡಿ-ಮಾಡಿ-ಬಿಚ್ಚಿ
ತಿಕ್ಕಿ ತಿಕ್ಕಿ ಒಗಿಬೇಕಾ
ಮಡಿಯ ಮಾಡಿ ಇಡಲು ಬೇಕೋ ಜೀವಾ ||೨||

ಲೋಕದ ಒಡೆಯನು ಮಾಡಿದ ಅರವೀದು
ಸ್ಥೂಲ-ಸೂಕ್ಷ್ಮ-ಕಾರಣ ದಾರವ ಸೇರಿಸಿದ್ದು
ಕಲ್ಮಠದ ಗುರುವು ಗುರುತಿಟ್ಟು ಹೆಣೆದದ್ದು
ಅರವಿಯ ತೊಳಿಯಪ್ಪ ಜೀವಾ ||೩||

## ಆತ್ಮಸ್ಥಲ

### ೩೦. ತಾನೇ ಆತ್ಮ

ದೇಹದ ಗುಣಗಳ ಒಳಗಾಗಿ ಆ
ದೇಹವೇ ನಾನೆಂದು ನಂಬಿದೆ ಮನವೆ ||ಪ||

ಭೂತ ಪಂಚಗಳ ದೇಹ
ಅದು ಬಿದ್ದ ಮ್ಯಾಲ ನಿರ್ದೇಹ
ಭೂತ ಪಂಚಗಳ ತತ್ವ
ಅದರೊಳು ಕೂಡಿ, ದೇಹ ಮಾಯ ||೧||

ದೇಹದ ಅಂಗಿ ಆತ್ಮನಿಗ
ಆತ್ಮದ ಅಂಗಿ ಪರಮಾತ್ಮಗ
ಆತನು ನೀನೋ ಮನವೆ ||೨||

ಮೂರು ದಿನದ ಸಂತಿ
ಮುಗಿಸಿ ದೇಹ ಹೊರಡುತಾದ
ಆತ್ಮದ ಅರುವ ಇರುವವಗ
ಕಲ್ಮಠದ ಗುರು ತೋರುತಾನವಗ ||೩||

### ೩೧. ಆತ್ಮದ ಸ್ವರೂಪ

ದೇಹ ಕಾಣುತಾದ
ದೇಹದ ರೂಪ ಕಾಣುತಾದ ||ಪ||

ಕರಿದು-ಬಿಳಿದು
ಕೆಂಪು-ಗಿಂಪು
ಇರುವದೆಲ್ಲವು ದೇಹದ ವರ್ಣವು ||೧||

ನೇಟ-ಮಾಟ
ಥಾಟ-ಥೀಟ
ಇರುವುದೆಲ್ಲವೂ ದೇಹದ ನೋಟ ||೨||

ಆತ್ಮಕೆ ಬಣ್ಣಿಲ್ಲ ಬಗೆದರೆ
ನೋಡಲು ರೂಪಿಲ್ಲ
ಗಾಳಿಗೆ ಗಾಳಿ ಬಯಲೇ ಬಯಲು ||೩||

ಕಲ್ಮಠದ ಗುರುವಿಗೆ ತಿಳಿತಲ್ಲ
ಬಲ್ಲಭಾವದಲ್ಲಿ ಹೊಳಿತಲ್ಲ
ಆತ್ಮನು ಬಯಲು-ನಿರ್ಬಯಲೆಂಬುದು ||೪||

೩೨. ನಿನ್ನೊಳಗ ಪರಮಾತ್ಮ

ಚಿಂತಿ ನಿನಗಿಲ್ಲಾತ್ಮ
ನಿಶ್ಚಿಂತಿ ಕಂಡ್ಯಾತ್ಮ ||ಪ||

ಹುಟ್ಟಿಸಿದವ ಮ್ಯಾಲಿಲ್ಲ
ನಿನ್ನೊಳಗೆ ಇಹನಲ್ಲ
ನಿನ್ನ ನೀ ಒಳಗರಿದು
ನಿಜ ಕಾಣು ಆತ್ಮ ||೧||

ರಕ್ಷಿಪನು ಮ್ಯಾಲಿಲ್ಲ
ನಿನ್ನೊಳಗೆ ಇಹನಲ್ಲ
ನಿನ್ನ ರೂಪವ ತಿಳಿದು
ಪರಮಾತ್ಮನ ಕಾಣು ||೨||

ಅಲ್ಲಿಲ್ಲ-ಎಲ್ಲಿಲ್ಲ
ನಿನ್ನಲ್ಲೆ ಹಾನಲ್ಲ
ನಿನ್ನ ನೀ ಅರಿತು ಬಿಡು
ಕಲ್ಮಠದ ಗುರುವನು ಕೂಡು ||ಪ||

# ಗುರು ಕರುಣಸ್ಥಲ

## ೩೩. ಗುರುರಾಯ ಬಂಧ ಬಿಡಿಸಿದ

ಗರಗರ ಗಳ್ಯಾಗ
ಗಿರಿಗಿರಿ ತಿರುಗಿದೆನು
ಗುರುರಾಯ ಬಂಧ ಬಿಡಿಸಿದನು ||ಪ||

ಏಸು ಜನುಮದ ಪುಣ್ಯ
ನಾನರಿಯೆ ಗುರುದೇವ
ನಿನ್ನ ನುಡಿ ತಿಳಿದು ನಾ ಮನುಜನಾದೆ ||೧||

ಏಸು ಜನುಮದ ಪೂಜೆಫಲ
ನಾನು ತಿಳಿಯೆ ಗುರುನಾಥ
ನಿನ್ನ ಕರುಣೆ ಪಡೆದು ನಾ ನನ್ನ ತಿಳಿದೆನು ||೨||

ಏಸು ಜನುಮದ ತಪವೋ
ನಾನ್ಹೇಗೆ ಹೇಳಲಿ?
ಕಲುಮಠದ ಗುರುದೇವ
ನೀ ಬಲ್ಲೆ ಎಲ್ಲವ ||೩||

## ೩೪. ಗುರುವಿನ ಸಮನಾಗು

ಗುರುವಿನ ಸೇವ್ಯಕ ಆದಾಂವಾ
ಗುರುವಿನ ಸಮಾನ ಆಗು ನೀನು ||ಪ||

ಗುರುವಿನ ಗುರುತ ಹಿಡಿದು
ಗುರುಬೋಧ ತೀರ್ಥವ ಕುಡಿದು
ಗುರು ಹೇಳಿದ ಮಂತ್ರವ ನುಡಿದು
ಗುರುವಿನ ಸಮಾನ ಆಗಲುಬೇಕು ||೧||

ಗುರು ತೋರಿದ ಹಾದೀ ನಡೆದು
ಗುರು ಕರುಣವ ಜವದಲಿ ಪಡೆದು
ಗುರುತರ ಬದುಕಲಿ ನುಡಿದು
ಗುರುವಿನ ಸಮಾನ ಆಗಲುಬೇಕು ||೨||

ನಾನೇನು ಬಲ್ಲೆನು ಮರುಳ
ಗುರುರಾಯ ತಿಳಿಸಿದ ಈ ತಿರುಳ
ಕಲ್ಮಠದ ಗುರುವಿನ ನುಡಿ ಭಾಳ ಸರಳ
ಶಿವರೂಪವಾಯಿತು ನನ್ನೆಲ್ಲ ಬಾಳಾ ||೩||

## ೩೫. ಗುರು ಮುಟ್ಟಿಗುರು

ಗುರು ಮುಟ್ಟಿ ಗುರು ಆಗು
ನೀ ಮಾಡು ನಿಜಗುರು ಧ್ಯಾನ ||ಪ||

ಗುರುಸ್ಮರಣೆ ಮಾಡಿದರ ಅಜ್ಞಾನ ಹರಿವುದು
ಗುರುಸ್ಮರಣೆ ಮಾಡಿಧರ ಆತಂಕ ಹರಿವುದು
ಗುರುಸ್ಮರಣೆ ಮಾಡಿದರ ಅನುಮಾನವಿಲ್ಲ
ಗುರುಸ್ಮರಣೆ ಮಾಡಿದರ ಅಡಚಣೆ ಇನ್ನಿಲ್ಲ ||೧||

ಗುರುನಾಥ ಎಂದ್ಹರ ಕತ್ತಲಿ ಕಡಿದ್ಹೋಯ್ತು
ಗುರುನಾಥ ಎಂದ್ಹರ ಆಪತ್ತು ಇಲ್ಲದಾಯ್ತು
ಗುರುನಾಥ ಎಂದ್ಹರ ದುಃಖ ದುಗುಡಿಲ್ಲ
ಗುರುನಾಥ ಎಂದ್ಹರ ಚಿಂತಿ ಇನಿತಿಲ್ಲ ||೨||

ಗುರುವಿಗಿ ಮಣಿದರ ಮಣಿಮುಕುಟ ತಮ್ಮಾ
ಗುರುವಿಗಿ ನೆನೆದರ ನೀನೆ ಅವನೊ ತಮ್ಮಾ
ಕಲ್ಮಠದ ಗುರು ಮುಟ್ಟಿ ಗುರುವಾದೆನಮ್ಮಾ
ಇದು ತಿಳಿದು ನೀವೆಲ್ಲ ಗುರುವಾಗಿರಿ ತಮ್ಮಾ ||೩||

## ೩೬. ಗುರುವಿನ ಮನೆ

ಗುರುವಿನ ಮನಿ ಭಾಳ ದೂರಿಲ್ಲ
ಗುರುತಿಟ್ಟು ನೀನದು ನೋಡಿಲ್ಲ ||ಪ||

ದಿನ ಬೆಳಕು ಹರಿದಾಗ
ಅವರಿವರ ಮನಿ ತಿರುಗಿ
ಕಾಲು ನೋವೆಂದು ಮರುಗಿ ಮರುಗಿ
ಗುರುಮನಿಗೆ ನೀ ಹೋಗದೆ ತಿರುಗಿ ||೧||

ಹೊತ್ತರಳಿ ನಿಂತಾಗ
ಹೊಡಮರಳಿ ನಾ ಹೊಂಟೆ
ಬಂಧು-ಬಾಂಧವರ ಮನಿ ತಿರುಗಿ
ಗುರುವಿನ ಮನೆಯ ಮರತೇನು ||೨||

ಗುರುರಾಯ ಬಾಯೆಂದು
ಕೈಬೀಸಿ ಕರೆದಾನು
ಗುರುತ್ಹಿಡಿದು ನಾನು ನೋಡಲಿಲ್ಲ
ಆದರೂ ಗುರು ಎನಗ ಬಿಡಲಿಲ್ಲ ||೩||

ಗುರುವಿನ ಮನಿ ಭಾಳ ದೂರಿಲ್ಲ
ಕಲ್ಮಠದ ಒಳಗ ಅವನು ಹಾನಲ್ಲ
ಕಲ್ಮಠದ ಗುರುವಿನ ನೆನಿ ಬಾಲ
ನೆನೆಯದೆ ನನಗ-ನಿನಗ ಗತಿಯಿಲ್ಲ ||೪||

## ೩೭. ಗುರುದೇವ ಎನ್ನಜೀವ

ಹ್ಯಾಂಗ ಮರೆಯಲಿ ಗುರುದೇವ
ನೀ ಎನ್ನಜೀವ||
ಹ್ಯಾಂಗ ಮರೆಯಲಿ ಗುರುದೇವ ||ಪ||

ಮಾತು ಮಾತಿಗೆ ತಿದ್ದಿ ತೀಡಿದನು
ಶ್ರೀ ಗುರುರಾಯ
ಹೊತ್ತು ಹೊತ್ತಿಗೆ ಮುದದಿ ನೋಡಿದನು ||೧||

ಕರುಣೆಯಿಟ್ಟು ಕೈಯ್ಯ ಹಿಡಿದಾನೋ
ಶ್ರೀ ಗುರುರಾಯ
ಮರೆಯದಾಂಗ ಮೋಹ ಮಾಡ್ಯಾನೋ ||೨||

ಬಳಿಗ ಕರೆದು ಮಾತನಾಡ್ಯಾನೋ
ಶ್ರೀಗುರುರಾಯ
ಕಿವಿಯಲ್ಲೊಂದು ಮಂತ್ರ ನುಡಿದಾನೋ ||೩||

ಒಳಗಿನಲ್ಲಿ ಬೆಳಗು ತೋರ್ಯಾನೋ
ಕಲ್ಮಠದ ಗುರುವು
ಬೆಳಗಿ ಎನಗೆ ಬೆಳಗು ಮಾಡ್ಯಾನೋ ||೪||

## ೩೮. ಗುರುಕೊಟ್ಟ ಗುಪ್ತಧನ

ಗುರುಕೊಟ್ಟ ಈ ಗುಪ್ತಧನ
ಸಿರಿವಂತನಾದೆನು ಆ ದಿನಾ ||ಪ||

ಹರಕ-ಮುರಕ
ಮನೆಯ ತಿರುಕ
ಚಿಂದಿ-ಬಂದಿ
ಉಟ್ಟು ಕಡುಕ
ಮನ್ಯಾಗಿನ ಭಾಂಡಿ ಒಡಕ ತಡಕ ||೧||

ಉಣುವದಕ್ಕಿಲ್ಲ-ಉಡಲಿಕ್ಕಿಲ್ಲ
ಏನೇನೂ ಇಲ್ಲ
ಬಡವರ ಬಡವ
ಕಡುಬಡವ-ಬಡವ ||೨||

ಬಡತನದ ಬೆಂಕ್ಯಾಗ
ಬೆಂದು ಬೆಂಡಾಗುತ
ಗುರುವಿನ ನೆನದೇನು ಮನದಾಗ
ಬಂದು ನಿಂತನು ಆ ಚಣದಾಗ ||೩||

ಕೊಳ್ಳೆಂದು ಕೊಟ್ಟಾನು
ಏಕಾಂತದಲಿ ಕರೆದು
ಸವೆಯದ ಸಂಪತ್ತು
ಕಲ್ಮರದ ಗುರುವಿನ ದಯ ಎನಮೇಲಿತ್ತು ||೪||

## ೩೯. ಗುರುಸಂಸ್ಕಾರ

ಗುರುಕೊಟ್ಟ ಗುರುತಿದು ಸಂಸ್ಕಾರ
ಆಯಿತೆನಗೊಂದ ಸರಿಯಾದ ಆಕಾರ ||ಪ||

ದೇಹಕ್ಕ ಅಂಗದಾ ಒಪ್ಪ
ಬರೆದಾನೋ ಘನ ಗುರುವಪ್ಪ
ಅಂಗಕ್ಕ ಲಿಂಗದ ಲೇಪ
ಮಾಡ್ಯಾನೋ ಗುರುರಾಯನಪ್ಪ ||೧||

ಮಾಂಸದ ಮುದ್ದಿಲಿಗಿ ಮಂತ್ರದ ಮುದ್ರೆ
ಲೇಸದಿ ಹಾಕಿದ ಗುರುದೇವ
ಮಂತ್ರsದ ಪಿಂಡಕ್ಕ ಮಾದೇವನ ರೂಪ
ಲೇಸದಿ ತೋರಿಸಿದ ಗುರುದೇವ ||೨||

ಅಂಗದ ಹಾದಿಯ ಹಂಗಿಸಿದ
ಲಿಂಗದ ಹಾದಿಯ ಹಿಡಿಸಿದ
ಒಂದೆಂಬ ಮಂತ್ರವ ನುಡಿಸಿ
ಭವದ ಕತ್ತಲೆ ಎಲ್ಲ ಕೆಡಿಸಿ ||೩||

ಕಲ್ಮಠದ ಗುರುವಿತ್ತ ಸಂಸ್ಕಾರ
ನನಗಾಯ್ತು ಸುಂದರದ ಆಕಾರ
ತಿಳಿದೇನೋ ತಮ್ಮಾ ಇದರ ಸಾರಾ
ತಿಳಿಯದಾದರ ಕೇಳೋ ನೀ ಸಣ್ಣ ಪಾರ ||೪||

## ೪೦. ಗುರು ಯಾರು?

ಗುರುಯಾರು? ಗುರುಯಾರು? ತಿಳಕೊಳ್ಳೊ
ನಿನ್ನೊಳಗ ನೀನು ಉಳಕೊಳ್ಳೋ ||ಪ||

ಊರಿಗಿ ದಾರಿ ತೋರಿದಾತನು ಗುರುವು
ಯಾರಿಗಿ ಯಾರೆಂದು ಹೇಳದಾತನು ಗುರು
ಮೀರಿದ್ದಕ್ಕ ಮೀರಾಸಾಬನೇ ಈ ಗುರು
ಮಾರಹರನ ಕೀಲ ತಿಳಿಸುವವನು ಗುರು ||೧||

ಅಂಗದಲಿ ಸಂಗ ನಿಂತವನು ಗುರು
ಲಿಂಗದ ನೆಲಿ ಕಲಿ ತಿಳಿಸಿದವ ಗುರು
ಭಂಗದಲಿ ರಂಗವನು ತುಂಬಿದವನು ಗುರು
ಶೃಂಗಾರ ಮೂರುತಿ ಶ್ರೀಗುರುವು ||೨||

ಮೂರನ್ನು ಬಿಡಿಸಿದವ ಮಾಗುರು
ಆರನ್ನು ಕೆಡಿಸಿದವ ಅರುವಿನ ಗುರು
ಏಳಕ್ಕ ಒಳಗೆ ಬರದಂತೆ ತಡೆದವನು
ಏಳ್ಗೆಯ ಬಯಸಿದವ ನಮ್ಮ ಗುರು ||೩||

ಅಜ್ಞಾನ ಹರಿದವನು ನಿಜಗುರುರಾಯ
ಜ್ಞಾನದಾನಿ ನಮ್ಮ ಕಲ್ಮಠದ ಗುರುರಾಯ
ಮಾನವಂತನು ನಮ್ಮ ಶ್ರೀ ಗುಬರಾಯ
ಜ್ಞಾನವಂತನು ನಮ್ಮ ಗುರುರಾಯ ||೪||

## ೪೧. ಗುರುದಕ್ಷಿಣೆ

ಗುರು ಕೊಟ್ಟ ಶಿಕ್ಷಾಕ
ನಂದೇನು ದಕ್ಷಿಣ
ಧನವಲ್ಲ; ನನ್ನ ದುರ್ಗುಣವ ||ಪ||

ದೇಹ ಗುಣದ ಭಾವ ಕಳೆದು
ಕಾಳ ಕಾಳಿಕೆಯ ತೊಳೆದು
ಮುಸುರೀಯ ಭಾಂಡವ
ಪಾದ ತೀರ್ಥದ ಪಾತ್ರೆ ||೧||

ಪಾತ್ರೆಯ ತೊಳೆದು ತಿಕ್ಕಿ
ಅದರ ಮ್ಯಾಲಿನ ಜಂಗು ಹೆಕ್ಕಿ
ನನ್ನದೆಲ್ಲವ ಅವನಿಗಿಕ್ಕಿ
ಅರ್ಪಿತವ ಮಾಡಿದೆನು ಕೆಟ್ಟ ಗುಣಗಳನು ||೨||

ಗುರುವಿತ್ತ ಗುರುತಿಗಿ
ನಂದೇನು ದಕ್ಷಿಣ
ತನು ಅವಗ, ಮನ ಅವಗ, .
ಅದರ ದುರ್ಗುಣಾಗಳೆಲ್ಲ ಅವಗ ದಕ್ಷಿಣ ||೩||

ಕಲ್ಮಠದ ಗುರುದೇವ ಬಳಿ ಬಂದು ಕರೆದಾನು
ಧನ ಬೇಡ, ಬಂಗಾರ ಬೇಡೆಂದು ಒರೆದಾನು
ದುಷ್ಟಗುಣಗಳ ಭಿಕ್ಷೆ ನೀಡೆಂದು ಕೇಳ್ಯಾನು
ಅದ ಕೊಂಡು ನನಗೆತ್ತಿ ಮುದ್ದು ತಾ ಮಾಡ್ಯಾನ||೪||

೪೨. ಗುರುಪಾದ

ಎಲೆಲೆ ಮಳ್ಳ ಹುಚಗೊಟ್ಟಿ! ನೀ
ಇಡು ಗುರುಪಾದಕ ಮನ ಘಟ್ಟಿ ||ಪ||

ಗುರುವಿನ ಪಾದ ಬಿಡದೆ ನೀ ಹಿಡಿದು
ನಡೆದು ನಡೆದು,
ವರವ ಪಡೆದು
ಈ ಭವನೀಗೋ ಹುಚಗೊಟ್ಟಿ ||೧||

ಗುರುವಿನ ಪಾದ ಮೇಲಾದ
ಸದ್ಗುರುವಿನ ಪಾದ ನಿಜಬೋಧ
ತಿಳಿದು ತಿಳಿದು ನೀ
ಅಳಿದು ಉಳಿದು ಬ್ಯಾಗೆ
ಈ ಭವನೀಗೋ ಹುಚಗೊಟ್ಟಿ ||೨||

ಕಾಣೆನೆಂಬುದದು ಕಂಡಿಲ್ಲ
ಗುರುವಿನ ಪಾದದ ನಿಜಸುಖ ಉಂಡಿಲ್ಲ
ಕಲ್ಮಠದ ಗುರು ನೀನಲ್ಲ
ಆ ಗುರುವಿನ ಹೊಂದಿ ಕಾಣಲ್ಲ ||೩||

## ಲಿಂಗಸ್ಥಲ

---

### ೪೩. ಲಿಂಗದ ಕಲೆ

ಲಿಂಗದ ಕಲೆಯ ತಿಳಿಯದೆ
ಅಂಗವೇ ಲಿಂಗ ಅಂದಿ ಹುಚಮಂಗ ||ಪ||

ಅಂಗ ಲಿಂಗಾಗಲು
ಲಿಂಗದ ನೆಲೆ ನೀ ತಿಳಿಬೇಕು
ಲಿಂಗವ ಪೂಜಿಸಿ ಗೆಲಿಬೇಕು ||೧||

ಲಿಂಗವ ಪೂಜಿಸಿ
ಲಿಂಗವ ನೀನಾಗು
ಅಂಗದ ಗುಣಗಳ ನೀ ನೀಗು ||೨||

ಹಿಂಗುವುದು ಭವರೋಗ
ನುಂಗುವುದು ಭವಕತಿ
ಲಿಂಗದ ಬೆಳಕಲಿ ನೀ ಕೂಡು ||೩||

ಕಪ್ಪಾದ ಬಣ್ಣದ
ಒಪ್ಪಾದ ಶಿವಲಿಂಗ
ಅಂಗೈಗೆ ತಂದು ನೀ ನೋಡು ||೪||

ಕಂಗಳ ಬೆಳಕನು
ಲಿಂಗದೊಳು ಕೂಡಿಸಿ
ಕಲ್ಮಠದ ಗುರುವಿನೊಳು ಕೂಡು ||೫||

### ೪೪. ರತ್ನ

ಇಷ್ಟಾದ ರತುನವಿದು
ಗುರು ಇಷ್ಟಪಟ್ಟು
ಕೊಟ್ಟಾದ ರತುನವಿದು ||ಪ||

ಕೊಳ್ಳುತೀನಂದರ
ಹಣಕ ಸಿಕ್ಕುವದಿಲ್ಲ
ಅಜಹರಿಸುರರೆಲ್ಲ ಪೂಜಿಸಲುಬೇಕಪ್ಪ ||೧||

ಭೋ ಭಾಗ್ಯ ಸಂಪತ್ತಿಗೆ
ಆಧೀನವಾದ ಅತ್ಯಧಿಕ ರತನವಿದು
ಇರಲೆಪ್ಪ ಜತನ, ಇದು ನಿನ್ನ ವತನ ||೨||

ಸ್ಥೂಲ ದೇಹದ ಮ್ಯಾಲ ಲೋಲ್ಯಾಡತಾದಪ್ಪ
ಧರಿಸಿನೋಡಲು ಜೀವಾ
ಹೊಳಿಹೊಳಿ ಹೊಳಿತಾದ
ಗುರುಕೊಟ್ಟ ರತುನವಿದು ||೩||

ಪರಕೆ ಪರತರವಾದ
ಪರಮನವತಾರವಿದು
ಕಲ್ಮ್ಶದ ಗುರುಕೊಟ್ಟ
ಕರುಣೆಯ ರತುನವಿದು ||೪||

೪೫. ಭಾವಲಿಂಗ

ಬುದ್ಧಿಗಧಿಕವಾದ ಭಾವ ಬರಿದಲ್ಲ
ಆದರೊಳಗೆ ಶಿವಹಾನ ತಂಗೀ ||ಪ||

ಸ್ಥೂಲದೇಹದ ಒಳಗ
ಮನೆಮಾಡಿ ಕುಂತಾನ
ಭಾವ ಬರಿದಲ್ಲ ತಂಗೀ ||೧||

ಕಣ್ಣಿಗಿ ಕಾಣಿಸದ
ಮನಕೆ ವೇದ್ಯವಾದ
ಭಾವಕ್ಕೆ ಗಮ್ಯವು ಭಾವಸಿದ್ಧಿ ||೨||

ಭಾವದ ಭಾಗ್ಯಕ್ಕ
ಶಿವದ ಸತ್ವವ ತುಂಬಿ
ಭಾವವೇ ಅಭವನು ತಂಗೀ ||೩||

ಭಾವದ ಭಾವಕ್ಕ ಶಿವದ ಭಾವಗೂಡಿ
ಕಲ್ಪಶದ ಗುರವೀನ ಗುರುಭಾವದೊಡಗೂಡಿ
ಭಾವವೆ ಭಾವಲಿಂಗ ತಂಗೀ ||೪||

### ೪೭. ಭಾವಭರಿತ ಭಾವಲಿಂಗ

ಭಾವಭರಿತ ಭಾವಲಿಂಗವೋ
ಅಕ್ಕವ್ವ ಕೇಳೇ ॥ಪ॥

ಭಾವದ ಕಲ್ಲ ಕಟೆದು
ಭಾವದೀಪ್ತಿಯ ಬೆಳಗಿನಲ್ಲಿ
ಭಾವದೀಪಕ ಭಾವಲಿಂಗ
ಭಕ್ತಿಭಾವದಿ ಭಜಿಸೆ ಅಕ್ಕ ॥೧॥

ಭಾವದ ಪತ್ತುರಿ ಸೋಸಿ
ಭಾವದ ಪುಷ್ಪವ ಮುಡಿಸಿ
ಭಾವ ಭಕುತಿಯಿಂದ ಒಲಿದು
ಭಾವಲಿಂಗವ ಪೂಜಿಸಕ್ಕ ॥೨॥

ಭಾವದ ಗಂಧವ ಪೂಸಿ
ಭಾವದ ಕತ್ತುರಿ ಒರಸಿ
ಸುಭಾಷ ಭಾಷಿತ ಭಾವಲಿಂಗನ
ಭಾವ ತುಂಬಿ ಪೂಜಿಸಕ್ಕ ॥೩॥

ಭಾವ ಭಾವದಿ ಬೆರೆಯುತಲಿ
ಭಾವ ಇಲ್ಲದ ನಿರ್ಭಾವವು
ಕಲ್ಪಿತದ ಗುರುವಿನಲ್ಲಿ
ಕಾಣದಾಯ್ತು ಭೇದಭಾವವು ॥೪॥

### ೪೭. ಭಾವಲಿಂಗ ಸ್ತೋತ್ರ

ಭಾವಲಿಂಗಯ್ಯನಿಗೆ
ಭಾವದೆಡೆಯ ಮಾಡಿ
ಭಾವಲಿಂಗನ ಸ್ತೋತ್ರವ ಹಾಡಿರೇ ॥ಪ॥

ತನು ದಣಿದು
ಮನ ದಣಿದು
ಭಾವ ಕುಸುಮದಾ ಮಾಲೆ ಸೂಡಿ
ಭಾವಲಿಂಗನ ಸ್ತೋತ್ರವ ಹಾಡಿರೇ ॥೧॥

ಭಾವ ದಣಿಯಲುಬೇಕು
ಭಾವ ತಣಿಯಲುಬೇಕು
ಭಾವಲಿಂಗನಸ್ತುತಿಯ ಅನವರವು ನಡೆದು
ಭಾವಲಿಂಗನ ಸ್ತುತಿಯ ಹಾಡಿರೇ ॥೨॥

ಭಾವದೊಳು ಭಾವ ಬೆರೆತು
ನಿರ್ಭಾವದ ನೆಲೆಯೊಳು
ಭಾವಲಿಂಗನಿಗೆ ಭಾವದರ್ಪಣೆಯ
ಕಲ್ಮಠದ ಗುರುವ ನುತಿಸಿರೆ ||೩||

## ೪೮. ಪ್ರಾಣಲಿಂಗಪೂಜೆ

ಪ್ರಾಣಲಿಂಗವ ಪೂಜಿಸೋ
ನಿನ್ನೊಳು ಪ್ರಾಣಲಿಂಗವ ನೀ ಭಜಿಸೋ ||ಪ||

ದುರಿತವ ಸುಟ್ಟಬೂದಿ
ಆದನೆ ಪೂಸು ಲಿಂಗಕೆ
ಮನದ ಕಾಳಿಕೆ ಕಳೆದು ಪತ್ರಿಯ
ಆದನೇ ಏರಿಸು ಲಿಂಗಕೆ ||೧||

ಪರಿಶುದ್ಧ ಮನದ ಹೂ
ಆದನೆ ಧರಿಸು ಲಿಂಗಕೆ
ನಿಷ್ಕಾಮ ಗಂಧವ
ತೇದು ಹಚ್ಚು ಲಿಂಗಕೆ ||೨||

ಪ್ರಾಣದ ದೀಪವ ಬೆಳಗು
ಶಕ್ತಿಯ ಎಣ್ಣೆಯ ಹಾಕು
ಏಕಾಗ್ರಮನದ ಬತ್ತಿ ಸೂಡು
ಕಲ್ಮಠದ ಗುರುವೆ ನೀ ಪ್ರಾಣವೆಂದು ||೩||

# ಜಂಗಮಸ್ಥಲ

---

## ೪೯. ಜಂಗಮಭಿಕ್ಷೆ

ಭಿಕ್ಷಾಕ ಬಂದಾನ ಜಂಗಮ
ಭಿಕ್ಷಾ ನೀಡಮ್ಮಾ ||ಪ||

ಕಾಲಲ್ಲಿ ಜಂಗವ ಕಟ್ಟಿ
ಕೈಯಲ್ಲಿ ದಂಡಕೋಲ್ಹಿಡಿದು
ಹೆಗಲಿಗೆ ಅಕ್ಷಯದ ಜೋಳಿಗೆ ಹಾಕಿ
ಭಿಕ್ಷಾಕ ಬಂದಾನ ಜಂಗಮ ||೧||

ಕಾಳು ಬೇಡನು, ಕಡಿಯ ಬೇಡನು
ಧಾನ್ಯ ಬೇಡನು ದವಸ ಬೇಡನು
ಕೀಳುಮನದ ಹಿಟ್ಟು ನೀಡಮ್ಮಾ
ಭಿಕ್ಷಾಕ ಬಂದಾನ ಜಂಗಮ ||೨||

ರಕ್ಷಕನು ನಮಗೆಲ್ಲಾ ಜಂಗಮ
ತಂದು ನೀಡುತಾನ ನಮಗ ಜ್ಞಾನದ ಅನ್ನ
ಕಲ್ಮಠದ ಗುರು ಹಾನ ಜಂಗಮ
ಅವನು ಭಿಕ್ಷಾಕ ಬಂದು ನಿಂತಾನ ಅಮ್ಮಾ ||೩||

೫೦. ಜಂಗಮರ ಜರಿಬ್ಯಾಡ

ಜಂಗಮರ ಜರಿಬ್ಯಾಡ
ಜಗದಲ್ಲಿ ಇದ್ದು ||ಪ||

ಜಗದ ಜೀವಕ ಜೀವ ಜಂಗಮ
ಜಗದ ರಕ್ಷನವನು ಜಂಗಮ
ಜಗದ ಜೀವರ ಸೇವ್ಯ ಜಂಗಮ
ಜಂಗಮರ ಜರಿಬ್ಯಾಡೋ ||೧||

ಜಂಗಮದಲ್ಲೇ ಜಗವು ಅಡಗಿಹುದು
ಜಂಗಮದಲ್ಲೇ ಜೀವರು ಸ್ಥಿತರಹರು
ಜಂಗಮವಿದ್ದಲ್ಲಿ ಶಿವಸುಖವಿಹುದು
ಜಂಗಮರ ಜರಿಬ್ಯಾಡೋ ||೨||

ಜಂಗಮನು ಜಗದ ಉದ್ಧಾರಕನು
ಜಂಗಮನು ಜಗದ ಪೂಜ್ಯನಾಗಿಹನು
ಕಲ್ಮಠದ ಗುರುವರ್ಯ ಜಂಗಮವರ್ಯನು
ಜಂಗಮರ ಜರಿಬ್ಯಾಡೋ ||೩||

೫೧. ಜಂಗಮ

ಜಂಗಮನ ಪೂಜಿಸುತ ನಿಜ
ಜಂಗಮನಾಗಬೇಕಣ್ಣ ||ಪ||

ಗಾಳಿಯಂತೆ ಎಲ್ಲೆಲ್ಲೂ ಹಬ್ಬಿ
ನೀರಿನಂತೆ ಹರಿದು ಹರಿದು
ಚೇತನದ ಚೇತನವು
ಅಂಥ ಜಂಗಮನಾಗಬೇಕಣ್ಣ ||೧||

ಜಗದ ಅಯ್ಯ ಜಗದ ಐಕ್ಯ
ಜಗದ ಭರಿತ ಜಗದ ಚರಿತ
ಜಗದ ಜೀವಕೆ ಜ್ಞಾನಜ್ಯೋತಿ
ಅಂಥ ಜಂಗಮನಾಗಬೇಕಣ್ಣ ||೨||

ಜಂಗಮನೆ ಜಗದಾಕಾರ
ಜಂಗಮನೆ ಲಿಂಗದವತಾರ
ಕಲ್ಮಠದ ಗುರುಜಂಗಮ ನಿಜಪೂರಾ
ಅಂಥ ಜಂಗಮನಾಗಬೇಕಣ್ಣ ||೩||

## ೫೨. ಜಂಗಮಾರ್ಚನೆ

ಜಂಗಮಾರ್ಚನೆ ನಡೆಯಿತಾದಣ್ಣಾ
ಯಾವಾಗ ನೋಡಲು ||ಪ||

ಕೆಟ್ಟಗುಣಗಳ ಸುಟ್ಟು
ಮಾಡಣ್ಣ ನಿಜವಾದ ಭಸ್ಮವ
ಅದನೆ ಹಚ್ಚಿ ಪೂಜೆ ಮಾಡಣ್ಣ ||೧||

ದುಷ್ಟವಿಷಯವ ಕುಟ್ಟಿ ಪುಡಿಮಾಡಿ
ನಿಜವಾದ ಧೂಪವು
ಅದನೆ ಬೆಳಗಿ ಪೂಜೆ ಮಾಡಣ್ಣಾ ||೨||

ಅಜ್ಞಾನಕೆ ಬೆಂಕಿ ಹಾಕಣ್ಣ
ನೀ ಜ್ಞಾನಜ್ಯೋತಿ ಬೆಳಗಿ ಬೆಳಗುತ
ಪೂಜೆ ಮಾಡಣ್ಣ ||೩||

ಜ್ಞಾನರೂಪಿ ಕಲ್ಮಠದ ಗುರುವರ
ಮಾನ ನೀಡಿ ಪೊರೆವ ಎಲ್ಲರ
ಜಂಗಮಾರ್ಚನೆ ಮಾಡಿ ನೋಡಣ್ಣ ||೪||

# ಅಷ್ಟಾವರಣಸ್ಥಲ

**೫೩. ಭಸ್ಮ**

ಭಾಳ ಲೋಚನ ಭಕ್ತಗ
ಭಾಳದಲೇನು ಸಿಂಗಾರ? ||ಪ||

ಕೈಗೆ ಕಡಗವು ಸಿಂಗಾರ
ಕಂಠಕ್ಕಾರವು ಸಿಂಗಾರ
ಮೂಗಿಗೆ ಮುತ್ತು ಸಿಂಗಾರ
ಭಾಳ ಲೋಚನ ಭಕ್ತಗ
ಭಸ್ಮ ಸಿಂಗಾರ ||೧||

ಮುಡಿಗೆ ಹೂವು ಸಿಂಗಾರ
ಕಣ್ಣಿಗೆ ಕಾಡಿಗೆ ಸಿಂಗಾರ
ಕಿವಿಗೆ ಓಲೆ ಸಿಂಗಾರ
ಭಾಳ ಲೋಚನಭಕ್ತಗ
ವಿಭೂತಿ ಸಿಂಗಾರ ||೨||

ದೇವಗೆ ಭಕ್ತ ಸಿಂಗಾರ
ಗುರುವಿಗೆ ಶಿಷ್ಯ ಸಿಂಗಾರ
ಕಲ್ಮಠದ ಗುರುವಿಗೆ ಅಣವೀರನೆ ಸಿಂಗಾರ ||೩||

**೫೪. ಅಂದದ ವಿಭೂತಿ**

ವಿಭೂತಿ ಇಲ್ಲದವನ ಮುಖವು
ಹಾಳು ದೇಗುಲಂತೆ ||ಪ||

ಪಾಳು ದೇಗುಲದೊಳಗ
ದೇವರಿಲ್ಲ ಪೂಜೆಯಿಲ್ಲ
ವಿಭೂತಿ ಇಲ್ಲದಕ
ಮೊಗದಲ್ಲಿ ಚಂದಿಲ್ಲ ||೧||

ಹಾಳು ದೇಗುಲದೊಳಗ
ಭಕುತಿಲ್ಲ ಭಕುತರಿಲ್ಲ
ವಿಭೂತಿ ಇಲ್ಲದಕ
ನೊಸಲಲ್ಲಿ ಕಳೆಯಿಲ್ಲ ||೨||

ಬೀಳು ದೇಗುಲದೊಳಗ
ದೀಪಿಲ್ಲ ಬೆಳಕಿಲ್ಲ
ವಿಭೂತಿ ಇಲ್ಲದವಗ
ಕಲ್ಮಠದ ಗುರುವಿನೊಲವಿಲ್ಲ ||೩||

೫೫. ರುದ್ರಾಕ್ಷಿ

ರುದ್ರನ ಕಣ್ಣಿಂದೊಗೆದ
ರುದ್ರಾಕ್ಷಿ ಧಾರಣ ಮಾಡೋ ||ಪ||

ರುದ್ರಾಕ್ಷಿ ಧಾರಣದಿ ಹೋಹುದು ಪಾಪವು
ರುದ್ರಾಕ್ಷಿಯಿಂದಲೇ ರುದ್ರನ ರೂಪವು ||೧||

ರುದ್ರಾಕ್ಷಿ ಧರಿಸಿದರ ಭದ್ರವಹುದೆಮಗೆ
ರುದ್ರಾಕ್ಷಿಯಿಂದಲಹುದು ಶುಭಮಂಗಳವು ||೨||

ರುದ್ರನ ನೆನೆಯುತಲಿ
ರುದ್ರಾಕ್ಷಿ ಧರಿಸಿದರ
ಭದ್ರವನೆ ಮಾಳ್ಪ ಭಾವ ಬರುವುದೆಮಗೆ ||೩||

ರುದ್ರಾಕ್ಷಿ ರುದ್ರನಾಭರಣ
ರುದ್ರಾಕ್ಷಿ ಮಂಗಳ ಕಿರಣ
ಕಲ್ಮಠದ ಗುರು ತಾನು ಧರಸ್ಯಾನ
ರುದ್ರನ ಪ್ರತಿರೂಪ ಎನಿಸ್ಯಾನ ||೪||

೫೬. ಪಾದೋದಕ

ಪಾದಪೂಜೀ ಮಾಡಿ ಮುಕ್ತಾಗೋ
ಗುರುವಿನ ಪಾದತೀರ್ಥಗೊಂಡು
ಮುಕ್ತಾಗೋ ||ಪ||

ನರರ ಕಾಲಿನಂತಲ್ಲದು
ಹರರೂಪಿ ಚರಪಾದ
ಹರಪಾದವ ತೊಳೆದು
ಪಾದತೀರ್ಥವ ಪಡೆಯೋ ||೧||

ಪಾದಧೂಳಿ ಕಣದಲ್ಲಿ
ವೇದಶಕ್ತಿ ಅಡಗಿಹುದು

ನಾದಲೋಲ ಶಿವನು ತಾನು
ಪಾದತೀರ್ಥದಲ್ಲೆ ಇಹನು ||೨||

ಸಿದ್ಧ ತೀರ್ಥ, ಶುದ್ಧತೀರ್ಥ
ಪಾದೋದಕ ಪ್ರಸಿದ್ಧ ತೀರ್ಥ
ಕಲ್ಮಠದ ಗುರುವಿನ ಪರಮ ಪಾವನ ಪಾದ ತೀರ್ಥ
ಕೊಂಡು ನೀನು ಪರಮನಾಗುತ ಬಾಳೋ ||೩||

೫೭. ಪಾದತೀರ್ಥ

ಅಷ್ಟ ತೀರ್ಥಗಳು
ಶ್ರೇಷ್ಠ ಪಾದದ ತೀರ್ಥವು ||ಪ||

ನಾನ್ಯಾರು? ನೀನ್ಯಾರು?
ಎಂಬ ಭೇದವ ಮರೆತು ನಿಂತು
ನಾನು ನೀನುಒಂದೇ ಆಗಿ
ಸಂದುಗೊಂಡು ಕೊಳ್ಳತೀರ್ಥವು ||೧||

ಗುರುಕರುಣೆಯು ಶಿಷ್ಯನೆಡೆಗೆ
ಹರಿದು ಹರಿದು ಬರುತಲಿಹುದು
ಗುರುವಿಲ್ಲ-ಶಿಷ್ಯನಿಲ್ಲ
ಇಬ್ಬರೇಕ ಗೊಳಿಸಿದ ತೀರ್ಥವು ||೨||

ಸ್ವರ್ಗದಮೃತಕೆ ಮಿಗಿಲು ಮಿಗಿಲು
ಎಲ್ಲ ತೀರ್ಥಗಳಿಗೆ ಶ್ರೇಷ್ಠವು
ಕಲ್ಮಠದ ಗುರುವರ್ಯನ
ನಿರ್ಮಲದ ಪಾದತೀರ್ಥವು ||೩||

೫೮. ಕರುಣರಸ

ಕರುಣರಸದ ಬಿಂದು
ಶಿವನ ಕರುಣದ ಸಿಂಧು ||ಪ||

ವರಚಿದ್ರಸವದು
ಚಿದ್ರೂಪ ನೀಡುವದು
ಕರುಣೆಯು ಸಾರ ಸಾರಾಯ
ವರತೀರ್ಥವು ಕರುಣ ರಸವು ||೧||

ಗುರುಕರುಣೆಯುದ್ಭವವಾಗಿ
ಹರನ ಕರುಣೆ ಕರಗಿಸಿಕೊಂಡು
ಲಿಂಗ ಕರುಣೆ ಸಕ್ಕರೆಯ ನುಂಗಿ
ಹರಿದು ಹರಿದು ಬರುತಲಿಹುದು ||೨||

ಶಿಷ್ಯ ತಾನು ಸದಮಲಭಾವದಿ
ಕಲ್ಮಠದ ಗುರುಮೂರ್ತಿಯ ಅರ್ಚಿಸಿ
ಪಾದವಿಡಿದು ಕರುಣೆ ಪಡೆದು
ಕರುಣ ರಸವ ಪಡೆದು, ಕುಡಿದು ||೩||

೫೯. ಪ್ರಸಾದ

ಪ್ರಸಾದದರ್ಥವ ಕೇಳಿರಿ ಜನರೆ
ಒರೆಯುವೆನದರ ಮರ್ಮವನು ||ಪ||

'ಪ್ರ' ಎಂದರೆ ಪರತರ ತತ್ವವು
'ಸಾ' ಎಂದರೆ ಗುರು ಸಾರಾಯವು
'ದ' ಎಂದರೆ ದಹತಿ ಜಸ್ಮವು ||೧||

ಪ್ರಸಾದ ಪರಶಿವನ ಒಲುಮೆ
ಪ್ರಸಾದ ಪರಶಿವನ ಬಲುಮೆ
ಪ್ರಸಾದ ಪರಾಶಕ್ತಿ ಸತ್ವವು ||೨||

ಪ್ರಸಾದದಿಂದಲೇ ಪರದ ; ದ್ಧಿಯು
ಪ್ರಸಾದದಿಂದಲೇ ಪರಮನ ಸಿದ್ಧಿಯು
ಪ್ರಸಾದದಿಂದಲೇ ಲೋಕ ಸಮೃದ್ಧಿಯು ||

ಅನ್ನ ಪ್ರಸಾದವು ಜೀವರಿಗೆ ಜೀವವು
ಜ್ಞಾನ ಪ್ರಸಾದವು ಜೀವರಿಗ ಆತ್ಮವು
ಕಲ್ಮಠದ ಗುರುವಿನ ದಿವ್ಯ ಪ್ರಸಾದವದು [illegible]ತ ಸಾಧಕವು ||೪||

೬೦. ಅನ್ನಬ್ರಹ್ಮ

ಅನ್ನದ ಅಗಳು ದೇವಯು ತಪ[illegible]
ಅದರೊಳಗ ಅಡಗ್ಯಾನ ಬ್ರಹ್ಮ ||[illegible]||

ಶಿವನ ನೆನೆದು ಸವೆಯೋ ಸುಮ್ಮಾ
ಆವನಿಂದ ಎಲ್ಲವೋ ತಮ್ಮಾ
ಕಾಳು ಕಾಳಿನಲ್ಲಿ ಕಾಲನ ಅಂಶವು
ತುಂಬಿ ತುಳುಕುತಾದ ತಮ್ಮಾ ||೧||

ಪ್ರಸಾದದಿಂದೆ ಮಾಂಸವು
ಪ್ರಸಾದದಿಂದೆ ಮಜ್ಜವು
ಪ್ರಸಾದದಿಂದೆ ಶುಕ್ಲ-ಶೋಣಿತವು
ಅನ್ನಪ್ರಸಾದದಿಂದ ಎಲ್ಲವೂ ತಮ್ಮಾ ||೨||

ಅನ್ನದಿಂದೆ ಚೇತನವು
ಅನ್ನದಿಂದೆ ಶಕ್ತಿ-ಮುಕುತಿ
ಅನ್ನದಿಂದೆ ಭಕುತಿ-ಭುಕುತಿ
ಅನ್ನದಿಂದೆ ಈ ಜಗವು ತಮ್ಮಾ ||೩||

ಅನ್ನಬ್ರಹ್ಮ ಬಿಟ್ಟರ
ಬೇರೆ ದೇವರು ಎಲ್ಲಿ ಹಾನೋ
ಅನ್ನವು ಉದರಕ ಬಿದ್ದಾಗ
ಕಲ್ಮಠದ ಗುರು ಕಾಣುತಾನೋ ||೪||

## ಷಟ್‌ಸ್ಥಲ

೭೧. ಭಕ್ತಿ

ಭಕ್ತಿ ಇದ್ದರ ಭಾಗ್ಯಕ್ಕೇನು ಕಮ್ಮಾ
ನಿನಗ ಒಲಿತಾನ ಬ್ರಹ್ಮಾ ||ಪ||

ಸಿರಿಯಾಳನ ಭಕ್ತೀಗೆ ಶಿವ ಬಂದು ನಲಿದಾ
ಗುಂಡಯ್ಯನ ಭಕ್ತೀಗೆ ಶಿವ ಬಂದು ಕುಣಿದಾ
ಭಕ್ತಿಗಾಗಿ ಶಿವನು ಬಾಣನ ಬಾಗಿಲ ಕಾಯ್ದಾ
ಭಕ್ತಿಯೇ ಮುಕ್ತಿಗೆ ಕಾರಣ ತಮ್ಮಾ ||೧||

ಭಕ್ತಿಯಿಂದ ಗುರುಧ್ಯಾನ ಮಾಡು
ಭಕ್ತಿಯಿಂದ ಲಿಂಗ ಪೂಜೆಯ ಮಾಡು
ಭಕ್ತಿಯಿಂದ ಜಂಗಮ ಸೇವೆಯ ಮಾಡು
ಭಕ್ತಿಯೆ ಸರ್ವಕೆ ಕಾರಣ ಕಾಣಣ್ಣಾ ||೨||

ಭಾಗ್ಯವಿಲ್ಲದ ಬಡವನಿಗೆ
ಭಕ್ತಿಯ ಸಂಪತ್ತು ಇದ್ದರ ಸಾಕು
ಭಕ್ತಿಯೇ ಶಿವನ ಒಲುಮೆಗೆ ಬೇಕು
ಕಲ್ಮಠದ ಗುರುವಿಗಿ ಭಕ್ತನೇ ಪಾಕು ||೩||

೭೨. ಭಕ್ತಿಪೂಜೆ

ಭಕ್ತಿ ಪೂಜೆಯು ದೊಡ್ಡದು
ಶಕ್ತಿಯೊಳಗ ಅದಕ ಹಿರಿದಿಲ್ಲ ಜಾಣ ||ಪ||

ಹತ್ತು ಕೆರೆಗಳ ನೀರ
ಹೊತ್ತು ನೀ ತಂದೀದಿ
ಸುರುವೀದಿ, ಸುರವೀದಿ ಲಿಂಗದ ಮ್ಯಾಲ
ಭಕ್ತಿ ಜಲವ ಸುರಿಯೋ ಜಾಣ ||೧||

ನೀರಲ್ಲಿ ಕಲಕಲಿಸಿ ವಿಭೂತಿ ಬಳದೀದಿ
ಕೊರಡೆಲ್ಲ ಸವೆಸಿ ಗಂಧವ ಹಚ್ಚೀದಿ
ಭಕ್ತಿಯ ವಿಭೂತಿ ಹಚ್ಚೋ
ಭಕ್ತೀಯ ಗಂಧವ ಹಚ್ಚೋ ಜಾಣ ||೨||

ಭಕ್ತಿಯ ಪುಷ್ಪವು
ಭಕ್ತಿಯ ಪತ್ರರಿ
ಭಕ್ತಿಯ ಧೂಪ-ದೀಪ
ಕಲ್ಮಠದ ಗುರುವಿಗೆ ಭಕ್ತಿಯ ಪೂಜೆ ಮಾಡೋ ||೩||

೭೩. ಪ್ರಸಾದಿ

ಪ್ರಸಾದಿಯ ಮನಸ್ಸದು ಪರಮ ಪ್ರಸನ್ನ
ಅಡಗ್ಯಾನ ಅದರಾಗ ಶಿವನು ಸಂಪೂರ್ಣ ||ಪ||

ದುಃಖವು ಬಂದೊದಗಿದರ
ಕುಗ್ಗುವವನಲ್ಲವನು
ಸುಖದಲ್ಲಿ ಅವನು
ಹಿಗ್ಗುವನಲ್ಲವನು ||೧||

ಲಾಭವು ಬಂದುದಾದರೆ
ಕುಣಿದಾಡಲಿಲ್ಲವನು
ಹಾನಿಯು ಒದಗಿದರ
ಕೆಳಬೀಳಲಿಲ್ಲವನು ||೨||

ತನ್ನವರು ಬಂದ್ರೆರ
ತನ್ನವರು ಎನಲಿಲ್ಲ
ಬ್ಯಾರೆಯವರು ಬಂದ್ರೆರ
ಬ್ಯಾರೆಯವರೆನಲಿಲ್ಲ ||೪||

ಪರಮ ಪ್ರಸಾದಿಯ ಭಾವವದು
ಅಲ್ಲಿಯ ಪರಮತ್ವವಿರುವುದು
ಕಲ್ಮಠದ ಗುರುವಿಗೆ ತಿಳಿದಿರುವುದು
ಮನದ ಮೈಲಿಗೆ ಬಿಟ್ಟು ಹೋಗಿರುವುದು ||೫||

## ೭೫. ಪ್ರಾಣಲಿಂಗಿ

ಜೀವದ ಜೀವದ ಜೀವ ಆ ದೇವ
ಪ್ರಾಣಕ ಪ್ರಾಣನೇ ಪ್ರಾಣಲಿಂಗ ||೧||

ನಿನ್ನ ಪ್ರಾಣ ಲಿಂಗವೋ?
ನೀ ಪ್ರಾಣಲಿಂಗಿಯೋ?
ತಿಳಿದು ನೋಡೋ ಅಪ್ಪಾ ||೨||

ಲಿಂಗದಲಿ ಪ್ರಾಣ
ಲಿಂಗ ಪ್ರಾಣ
ಪ್ರಾಣದಲಿ ಲಿಂಗವು
ಪ್ರಾಣಲಿಂಗಿ ||೩||

ಪ್ರಾಣಕ್ಕೆ ಪ್ರಾಣ ಜೋಡಿಲ್ಲ
ಪ್ರಾಣಕ್ಕೆ ಲಿಂಗದ ಜೋಡೋ
ಮನಕ್ಕೆ ಮನವು ಜೋಡಿಲ್ಲ
ಮನಕ್ಕೆ ಲಿಂಗದ ಜೋಡೋ ||೪||

ತಿಳಿದು ಪೂಜಿಸು ಲಿಂಗವ
ಅಳಿದು ಹೋಗುವುದು ಅಂಗವ
ಪ್ರಾಣವೂ ಲಿಂಗ, ಲಿಂಗದಲಿ ಪ್ರಾಣ
ಕಲ್ಮಠದ ಗ.ರುವು ತಿಳಿಸಿದ ಜಾಣ ||೫||

## ೭೬. ಶರಣ

ಲೋಕದ ಕಣ್ಣಲಿ ಹುಚ್ಚಾಗಿ ಕಂಡು
ಶಿವನ ಮೆಚ್ಚಿದವನು ಶರಣ ||೧||

ತನ್ನದು ಅಳಿದವನು ಶರಣ
ಪರಹಿತ ಬಯಸುವವನು ಶರಣ
ಸಕಲ ಜೀವರಲಿ ದೇವರ ಕಂಡು
ದೇವರು ಆದವ ಹರ ಶರಣ ||೧||

ಬೈದವರಿಗೆ ಬಯ್ಯದವನು ಶರಣ
ಜೀವರ ಸೇವಕ ಶಿವಶರಣ
ಬೈದವರಿಗೆಲ್ಲ ಬಳಗೆ ಕರೆಯುತ
ಪೊರೆದವನೆ ಪರಮಾನುಭಾವಿ ಶರಣ ||೨||

ಮರಣವ ಗೆಲಿದವನು ಶರಣ
ಜನನವ ಅಳಿದವನು ಶರಣ
ಮರಣ-ಜನನಗಳ ಮೀರಿ ನಿಂತವನು
ಕಲ್ಮಠದ ಗುರು ನಿಜ ಶರಣ ||೩||

## ೬೬. ಶರಣರ ಸಂಗ

ಶರಣರ ಸಂಗವ ಮಾಡೋ
ಹಾಲು-ಸಕ್ಕರಿ ಸವಿ ಅದು ನೋಡೋ ||ಪ||

ಶರಣರ ಸಂಗವ ಮಾಡಿದರ
ಹರಿವುದು ಘೋರ ದುರಿತವು
ಶರಣರ ಸಂಗ ಮಾಡಿದರ
ಪರಿಹಾರ ಎಲ್ಲ ಕಷ್ಟವು ||೧||

ಶರಣರ ಸೇವಾ ಮಾಡಿದರ
ದೊರಕುವುದು ಎಲ್ಲ ಸಂಪತ್ತು
ಶರಣರ ಸೇವಾ ಮಾಡಿದರ
ಧರೆಯೊಳು ಅವನೆ ಪರವಸ್ತು ||೨||

ಶರಣರ ಪಾದಜ ಧೂಳಿಯಾದರ
ಅದಕ್ಕಿಂತ ಬ್ಯಾರೆ ಹಿರಿದಿಲ್ಲ
ಶರಣರ ಪಾದದ ಪಾದುಕೆ ಆದರ
ಕಲ್ಮಠದ ಗುರು ಅಲ್ಲಿಹನಲ್ಲ ||೩||

## ೬೭. ಶರಣೆನ್ನಿ

ಶರಣರ ಪಾದಕ್ಕ
ಶರಣೆನ್ನಿರೋ ||ಪ||

ತನಗಾಗಿ ಚಿಂತಿಸದ
ಪರದುಃಖ ಅರಿತಿರುವ
ನಿಜಶರಣನಡಿಗೆ ಶರಣೆನ್ನಿರೋ ||೧||

ಪರರ ದುಃಖವನ್ನೆಲ್ಲ
ತನ್ನ ದುಃಖವುಯೆಂದು
ತಿಳಿದಂಥ ಶರಣನಡಿಗೆ ಶರಣೆನ್ನಿರೇ ||೨||

ರೋಗ-ರುಜಿನಬಾಧೆಗಳ
ಭಾರಸಂಸಾರ ಝಳ
ಹರಿದೋಗಿವ ಕಲ್ಮಠದ ಗುರುವಿಗೆ ಶರಣೆನ್ನಿರೋ ||೩||

## ಸಂಕೀರ್ಣ

### ೭೮. ಮಾನವಧರ್ಮ

ಮಾನವ ಧರ್ಮವು
ಮರೆಯಲು ಬಾರದದು
ಆದು ಬಲು ದೊಡ್ಡದು ಜಗದಲಿ ||ಪ||

ನಿನ್ನಂತೆ ಪರರ ತಿಳಿದು
ನಾ ನೀನೆಂಬ ಭೇದವ ಅಳಿದು
ಎಲ್ಲರೂ ಕೂಡಿ ಬಾಳುತಲಿ ಏಕಾಗಿ
ಇರಬೇಕು ಜಗದಲಿ ದೀಪದ ಬೆಳಕಾಗಿ ||೧||

ಶಿವಕೊಟ್ಟ ಸಂಪತ್ತು ಈ ಭೂಮಿ
ಎಲ್ಲವೂ ನನಗೆನಲು ಬೇಡ
ಸ್ವಾರ್ಥ ಹಪಹಪಿ ಬಿಡಬೇಕು
ಇದ್ದುದರೊಳಗ ಉಂಡು ನಗಬೇಕು ||೨||

ನಾವೆಲ್ಲ ಆ ಶಿವನ ಮಕ್ಕಳಪ್ಪಾ
ಅಣ್ಣ ತಮ್ಮರಾಗುವುದು ಸರಿ ತಿಳಿಯಪ್ಪಾ
ಕಲ್ಮಠದ ಗುರು ಹೀಂಗ ಹೇಳ್ಯಾನಪ್ಪ
ಇದು ಮರತರ ಮಾನವಗ ಕೇಡ ನೋಡಪ್ಪ ||೩||

## ೭೯. ಯಾವ ಕುಲ?

ಕುಲವು ಎಲ್ಲ್ಯಾದ್ದೇಳೋ ತಮ್ಮಾ
ನಿನ್ನ ಚೆಲುವ ದಾವುದು ಹೇಳೊ ತಮ್ಮಾ ॥ಪ॥

ಕುಲ-ಛಲಕ ಹೋರಾಡಿ ಸತ್ತಿ
ಕುಲಗೇಡಿಯಾಗಿ ನೀ ಅತ್ತಿ
ನೀ ಮ್ಯಾಲಿನವ ಅಂತ್ಹೇಳಿ ಕುಂತಿ
ಅವರು ಕೆಳಗಿನವರು ಬ್ಯಾರೇ ಅಂತಿ ॥೧॥

ಅವನಂಗ ನೀನೂ ತಮ್ಮಾ
ಇಬ್ಬರ ರಕ್ತ ಕೆಂಪಾದ ತಮ್ಮಾ
ಹೊರಗಿನ ಬಣ್ಣ ಬ್ಯಾರೆ ಇದ್ರೇನು
ಒಳಗಿನ ಆತ್ಮನು ಒಂದವನು ॥೨॥

ಜಾತಿ-ಜಾತಿ ಅಂತ ಹೇತಿ
ಮನುಷ್ಯಾರ ಮ್ಯಾಲಂತೂ ಇನಿತಿಲ್ಲ ಪ್ರೀತಿ
ಎಲ್ಲಾರೂ ಶಿವನಿಗೆ ಪ್ರೀತಿ
ಹೀಂಗ ಹೇಳ್ಯಾನ ಕಲ್ಮಠದ ಗುರು ಪ್ರಖ್ಯಾತಿ ॥೩॥

## ೮೦. ಸಿರಿವಂತಿಕೆ

ಸಿರಿವಂತಿಕೆ ಬಂದ್ಽರ
ಕುಣದಾಡುತಿ ಯಾಕೋ?
ಸ್ಥಿರವಲ್ಲ ಅದು ತಿಳಿ ಮನುಜಾ ॥ಪ॥

ಗ್ವಾಡೀ ಮ್ಯಾಲಿನ ಸುಣ್ಣಾ
ನೀರ ಮ್ಯಾಲಿನ ಗುರುಳಿ
ಯಾವಾಗ ಏನೋ
ತಿಳಿಯದು ಮನುಜಾ ॥೧॥

ಗಾಳಿಗಿಟ್ಟಾ ದೀಪಾ
ಕಾಮನ ಬಿಲ್ಲಣ್ಣಾ
ಯಾವಾಗ ಹೋಗುವುದು
ತಿಳಿಯದೇ ಮನುಜಾ ॥೨॥

ಸಿರಿವಂತಿಕೆ ಬಂದಽರ
ಶಿವ ಕೊಟ್ಟ ದಾನ ಅನ್ನು.
ಶಿವನಿಗೆ ಸಲಿಸುತ ಮನುಜಾ

೪೨

ಕಲ್ಮಶದ ಗುರುವಿನ ನಂಬು
ನೀ ಮನುಜಾ ||೩||

## ೭೧. ಒಳಗು-ಹೊರಗು

ಮನದೊಳಗ ಹೊಲಸ
ಮ್ಯಾಲಿನ ಸೊಗಸ
ಬರೀ ವೇಷ-ನಾಟಕದ ನೋಟ ||ಪ||

ಕಪಟ ಗುಣಗಳು
ಹೊಟ್ಟೆಯಲ್ಲಿಟ್ಟುಕೊಂಡು
ಪಟ-ಪಟ ನುಡಿದರ ಏನುಂಟು? ||೧||

ಕಲ್ಮಷದ ತಂತ್ರಗಳು
ಅನುದಿನವು ನಡೆಸುತ್ತ
ವಟ-ವಟಗುಟ್ಟಿದರ ಏನುಂಟು? ||೨||

ಮನದೊಳಗ ಒಬ್ಬರ
ಮುಳುಗಿಸಲು ಬಗೆಯುತ್ತ
ಕಣ್ಣನು ಮುಚ್ಚಿದರೆಂಥದು ಧ್ಯಾನ ||೩||

ಮನದೊಳಗನ್ಯರ ಮೋಸವ ಯೋಚಿಸಿ
ಜಪಮಣಿ ಎಣಿಸಿದರದು
ಎಂಥದು ಮನನ ||೪||

ನುಡಿಯಲಿ ನುಡಿಯುತ
ನಡೆಯಲಿ ತಪ್ಪಿದರ
ಕಲ್ಮಶದ ಗುರುವಿನಲಿ ಎಂಥದು ಸ್ಥಾನ ||೫||

## ೭೨. ಬೆಲ್ಲದಂತಿರು

ಬೆಲ್ಲದ ಅಚ್ಚಾಗಿ ಜಗದೊಳು ಇರಬೇಕು
ಸವಿದು ನೋಡಿದರ ರುಚಿಯಲ್ಲ ||ಪ||

ಖುಲ್ಲ ಮಾನವರೊಳಗ ಇರದಂಗ ಇರಬೇಕು
ಬಲ್ಲ ಮಾನವರೊಳಗ ಬಲ್ಲಂಗ ಇರಬೇಕು
ಎಲ್ಲ-ಎಲ್ಲರಿಗು ಬೆಲ್ಲಾಗಿ ಇರಬೇಕು
ಶರಣಗಣದ ಎದುರು ಬಿಲ್ಲಾಗಿ ಇರಬೇಕು ||೧||

ತಲೆಯೆತ್ತಿ ನಡೆದರ ಅಹಂಕಾರ
ಕೈಮುಗಿದು ನುಡಿದರ ಶಿವಸಾರ
ಶರಣರ ಅಡಿಗೆ ಶರಣಾಗಿರುತಲಿ
ಕರುಣವ ಪಡೆದರ ಅದು ಮ್ಯಾಲ ||೨||

ಹಲ್ಲೊಳಗ ಇರಬ್ಯಾಡ ಜಗದೊಳಗ
ಬೆಲ್ಲದಚ್ಚಾಗಿ ಇರು ನಾಲಿಗಿಮ್ಯಾಲ
ಕಲ್ಮಠದ ಗುರು ಹೀಂಗ ಹೇಳ್ಯಾನಲ್ಲ
ಇದು ತಿಳಿದು ನುಡಿಯಲು ಬೇಕು ಲೋಕೆಲ್ಲ ||೩||

## ೭೩. ಮನಸ್ಸು

ಮನಸ್ಸಾದ ಚಂಚಲ
ಅದು ಭಾಳ ಚಪಲ ||ಪ||

ನೀ ಇಲ್ಲೆ ಇರುತಿ
ನಿನಗೆಲ್ಲಿಯದು ಸುರತಿ
ನಿನಗಿಲ್ಲಿ ಬಿಟ್ಟು ಓಡುತಾದೋ
ನಿನ್ನಲ್ಲೆ ಇದ್ದಂಗ ಕಾಣುತಾದೋ ||೧||

ನೋಡೆನಂತಿ ಅದಕ ಬಣ್ಣಿಲ್ಲ
ಆಕಾರದ ರೂಪ ಅದಕ್ಕಿಲ್ಲ
ಹಿಡಿದೆನಂತಿ ಕೈಗೆ ಸಿಗುದಿಲ್ಲ
ಗಾಳೀಗಿ ಮುಂದಾಗಿ ಹರಿವುದಲ್ಲ ||೨||

ಅದು ಭಾಳ ಚಪಲ
ನಿನಗ ತಿಳಿಲಿಲ್ಲ ಕೀಲ
ಕಲ್ಮಠದ ಗುರು ತಿಳಿದ ಅದರ ಸೊಲ್ಲ
ಕೇಳಬೇಕಪ್ಪ ಅವಗ ಅದರ ಮೂಲ ||೩||

## ೭೪. ಹೊಲೆ ಯಾವುದು?

ಹೊಲೆ ಯಾವುದೋ ಹುಚ್ಚಾ
ಹೊಲೆ ಯಾವುದೋ ||ಪ||

ಬಾಯಲ್ಲಿ ತಾಯೆಂದು
ಕಾಮಿಸಿದವ ಹೊಲೆಯ
ಕೈಯಿಟ್ಟು ಘಾತುಕವ
ಮಾಡಿದವ ಹೊಲೆಯ ||೧||

ನಂಬಿದವರ ಗೋಣ
ಕೊಯ್ದವನು ಹೊಲೆಯ
ಇಂಬಾಗಿ ಬಂದು
ಬೊಂಬಾದವನು ಹೊಲೆಯ
ಘಾಸಿ-ಮೋಸ-ಘಾಸಿ
ಮಾಡಿದವನು ಹೊಲೆಯ
ಹೀನ ಕಾರ್ಯವು ಬಿಡದೆ
ಕಲ್ಮಠದ ಗುರುವ ನಂಬದವನು ಹೊಲೆಯ ||೩||

೭೫. ಡಂಭಾಚಾರ

ಇವನನಾಚಾರಿ
ಬಾಯಲ್ಲಿ ಸದಾಚಾರಿ ||ಪ||

ಮುಂಬಾಗಿಲಿನಲಿ ಧರ್ಮದ ಧರ್ಮ
ಹಿಂಬಾಗಿಲಿನಲಿ ಬರೆ ಕರ್ಮ
ಮುಂಬಾಗಿಲಿನಲಿ ದಾನ ದಾನ
ಹಿಂಬಾಗಿಲಿನಲಿ ದಾನವ್ವ ದಾನವ ||೧||

ಮೂರ್ಖೊತ್ತು ಹೊರಗ ತೋಳಿತಾನ
ಒಳಗ ಗಬ್ಬೆದು ನಾರುತಾನ
ಬಾಯಲ್ಲಿ ವೇದಾಂತ
ಮನದೊಳಗ ಕತ್ತರಿ ಘಾತ ||೨||

ನಾಲಿಗಿ ನೋಡಿದರ ಬೆಲ್ಲದ ಅಚ್ಚು
ಮನಸು ತೆರೆದು ನೋಡಿದರ ಬೆಂಕಿ ಕಿಚ್ಚು
ನುಡಿವುದು ಒಂದು ನಡೆವುದು ಒಂದು
ಕಲ್ಮಠದ ಗುರುವಿಗೆ ಹೊಂದು ನೊಂದು ||೩||

೭೬. ಉಪದೇಶ

ಉಪದೇಶ ಮಾಡವರು
ದೇಶೆಲ್ಲ ತುಂಬ್ಯಾರ
ಅವರೆಲ್ಲ ಹಿರಿಯರೇನಣ್ಣ ||ಪ||

ನೀತಿ ನಡೀಬೇಕೆಂಬ ಉಪದೇಶ
ಅನೀತಿ ಇವರ ನಿಜ ವೇಷ

ಪುರಾಣ ಹೇಳುತ
ಹೂರಣ ತಿಂತಾರ ಯಾರಿಗೆ ಬೇಕು ಉಪದೇಶ ||೧||

ಧನಕೂಡಿ ಇಡಬ್ಯಾಡ್ರಿ ಅಂತಾರ
ಧನದ ಗದ್ದಿಗಿ ಮ್ಯಾಲ ಕುಂತಾರ
ಶಾಸ್ತ್ರವ ಹೇಳುತ
ಬದನಿಕಾಯಿ ತಿಂದವರ ಉಪದೇಶ ಯಾರಿಗೆ ಬೇಕಣ್ಣಾ ||೨||

ಉಪದೇಶಾ ಹೇಳ್ತಾರ ಗುಡ್ಡದಷ್ಟು
ನಡವಳಿಕೆ ಅವರಲ್ಲಿ ಇಲ್ಲ ಎಷ್ಟೂ
ಬೆಂಕಿ ಬೀಳಲಿ ಅವರಿಗೊಂದಿಷ್ಟು
ಕಲ್ಮಠದ ಗುರುವೀಗಿ ಸಿಟ್ಟು ಸಿಟ್ಟು ||೩||

## ೭೭. ಸತ್ಯ

ಸತ್ಯದಲಿ ಹುದುಗಿಹನು ಶಿವನು
ಸತ್ಯದ ಕಣ್ಣಿಂದ ಅವನನ್ನು ಕಾಣು ||ಪ||

ಸತ್ಯವ ಮಾತಾಡು
ಸತ್ಯದ ಹಾದಿ ಕೂಡು
ಸತ್ಯದಲಿ ಜೀವನ ಮಾಡು
ಅದರಲಿ ಶಿವನನು ಹುಡುಕು ||೧||

ಸತ್ಯವು ಸುಂದರವು
ಸತ್ಯವು ಬಂಧುರವು
ಸತ್ಯವೇ ಮನುಜಗೆ ನಿಜದ ಶೀಲ
ಸತ್ಯವೇ ಮುಕ್ತಿಯ ನೆಲೆಯ ಕೀಲ ||೨||

ಸತ್ಯದಲಿ ಶಿವನಪ್ಪ
ಶಿವನು ಸತ್ಯ ಹಾನಪ್ಪ
ಕಲ್ಮಠದ ಗುರು ಹಾನ ಸತ್ಯ
ಇದ ತಿಳಿದರಾಗುತಿ ನಿತ್ಯ ||೩||

## ೭೮. ನಿಂದೆ ಬೇಡ

ನಿಂದೆ ಆಡಲು ಬ್ಯಾಡ
ಬಂದಾಗುವುದು ಬಾಯಿ
ನಿಂದೆ ಮಾಡಲು ಬ್ಯಾಡೋ ಮನುಜಾ ||ಪ||

ಹಿಂದ ನಿಂದೆಯ ಮಾಡಿ
ಮುಂದಣ ಜನ್ಮಕ ಹಂದ್ಯಾಗಿ ಹುಟ್ಟುವುದು
ಮುಂದ ನಿಂದೆಯ ಮಾಡಿ
ಇಂದಿನ ಜನ್ಮಕ ಹಂದ್ಯಾಗಿ ಬಾಳುವುದು ||೧||

ನಿಂದೆ ಮಾಡುವ ಬಾಯಿ ಬಚ್ಚಲದ ಕುಣಿಯು
ಬಾಯ ನಾಲಗೆ ಬಾಲಹುಳುವು
ಬಾಯೊಳಗಿನ ಹಲ್ಲೊಳು ಬಚ್ಚಲದ ಕಲ್ಲು
ನಿಂದೆ ಮಾಡಲು ಬ್ಯಾಡೋ ಮನುಜಾ ||೨||

ನಿಂದೆಗಿಂತ ಹಿರಿದು ಪಾಪವಿಲ್ಲ ಜಗದಲಿ
ನಿಂದೆಗಿಂತ ಕೆಟ್ಟ ಕರ್ಮವಿಲ್ಲ
ನಿಂದೆಗಿಂತ ಕೀಳಿಲ್ಲ ಜಗದಲಿ
ಕಲ್ಮಠದ ಗುರು ತಾನು ಮರೆಯಾಗತಾನ ||೩||

## ೭೯. ಹಣ

ಹಣದಕ್ಕಿಂತ ದೊಡ್ಡದಾವುದೋ ಮನುಜಾ
ಹೆಣದಂತೆ ಆಗುತಾದ ಈ ಸಮಾಜಾ ||ಪ||

ಹ್ಣಣವಿದ್ದರ ಘಣ ಘಣ
ಹಣವಿದ್ದರ ಮಣ ಮಣ
ಹಣವಿಲ್ಲದಿರೆ ಎಲ್ಲ ಭಣ ಭಣ ||೧||

ಹಣವಿದ್ದರ ದೊಡ್ಡಪ್ಪ
ಹಣವಿದ್ದರ ಹಡದಪ್ಪ
ಹಣವಿದ್ದರ ಅಪ್ಪನಪ್ಪ
ಹಣ ತೀರಿದಾಗ ಬಿದ್ದಾನೋ ಧೊಪ್ಪ ||೨||

ಹಣದಿಂದ ಸುಗುಣ
ಹಣದಿಂದ ಗಣ್ಯಗುಣ
ಹಣದಿಂದ ಎಲ್ಲ ಪುಣ್ಯ
ಹಣವಿಲ್ಲದಾದಾಗ ಒಣ ಒಣ ||೩||

ಹಣಕ್ಕಿಂತ ಸುಗುಣ ದೊಡ್ಡದು ತಿಳಿ ಮನುಜಾ
ಹಣದ ಮೋಹ ಬಿಡು ಗುಣದ ಮೋಹವ ತೊಡು
ಕಲ್ಮಠದ ಗುರುದೇವ ಹೀಂಗಂತ ಹೇಳ್ಯಾನ
ಬಲ್ಲವರು ತಿಳಕೊಳ್ಳಬೇಕು ಈ ಖೂನ ||೪||

## ೮೦. ನಾಲಗಿ ನುಡಿ

ಒಳ್ಳೆಯ ನುಡಿ ಆಡು ಮಳ್ಳೀ
ಸುಳ್ಳ ಸುಳ್ಳಾಗಿ ನಾಲಗೆ ಹರಿದ್ಯಾಕ ಬಿಡುತಿ? ||ಪ||

ಎಲುವಿಲ್ಲದ ನಾಲಗಿ
ಬಲ ಎಡಕ ತಿರುಗುತಾದ
ಖುಲ್ಲ್ಯಾಕ ಮಾತಾಡತಿ ಮಳ್ಳೀ ||೧||

ನಾಲಗಿ ಚಪಲಕ ನುಡಿಸಲ್ಲ
ಶಿವ ಮೆಚ್ಚುವದಕ ನುಡಿಬೇಕ
ಸುಳ್ಯಾಕ ಸೊಗಡ್ಯಾಕ ಆಡುತಿ ಮಳ್ಳೀ ||೨||

ಒಳ್ಳೆಯ ನಾಲಗೆಗೆ ನಾಡೆಲ್ಲ ಒಲಿತಾದ
ನಾಲಗೆ ತೊದಲಿದರ ಜನರೆಲ್ಲ ಬೈತಾರ
ಬೆಲ್ಲದ ನಾಲಿಗೆಗೆ ಬಹುಮಾನ
ಖುಲ್ಲ ನಾಲಗೆಗೆ ಅವಮಾನ ||೩||

ಶಿವನ ನುಡಿ ಆಡಿದರ ಶಿವನಾದಿ ಜಗದಾಗ
ಕಲ್ಮಠದ ಗುರುವಾದಿ ಜನರೊಳಗ
ಒಳಿತಾಗು-ಕಳತಾಗು
ಜನಮನಕೆ ಜೇನಾಗು ||೪||

## ೮೧. ಜ್ಞಾನದ ಬೆಳಗು

ದೀಪದ ಬೆಳಕೇನು ಬೆಳಕಲ್ಲ
ನಿಜಜ್ಞಾನದ ಜ್ಯೋತಿ ಬೆಳಗಣ್ಣಾ ||ಪ||

ಅರುಪಿನ ಕಡ್ಡಿ ಕೊರೆದು
ದೀಪ ಹಚ್ಚಣ್ಣಾ
ಮರವನ್ನು ಮರೆತು
ಆರಿಯೋ ಹುಚ್ಚಣ್ಣಾ ||೧||

ಜ್ಞಾನದ ಬೆಳಕಿಗೆ
ಭಕ್ತಿಯ ಎಣ್ಣೆ
ನಿಷ್ಠೆಯ ಬತ್ತಿಯು ಆದಕೆ
ನಂದಾದೀಪದಂತೆ ಕಾಯಬೇಕಣ್ಣಾ ||೨||

ಅಂದದ ಮನೆಯಲ್ಲಿ ತುಂಬೇದ ಕತ್ತಲಿ
ಜ್ಞಾನದ ದೀಪವ ಹೊತ್ತಿಸಿ ಕಳೆಯುತ
ಜ್ಞಾನದ ಮನದಿಂದ ಕಲ್ಮಠದ ಗುರುವಿನ
ಮೌನದಿಂದಲಿ ನೆನೆದು, ಅವನೊಳಗ ಬೆರೆದು ||೩||

೮೨. ತಿಳಿಯಾಗು

ತಿಳಿ ತಿಳಿ ಅಂದ್ವರ ತಿಳಿವಲ್ಲೋ ಯಪ್ಪಾ
ತಿಳಿನೀರಿಗಿಂತ ನೀ ತಿಳಿಯಾಗಬೇಕೋ ||ಪ||

ಒಳಗೊಂದು ಮುಚ್ಚಿಟ್ಟು
ಹೊರಗೊಂದು ತೋರಿಸದೆ
ಹೊರಗ-ಒಳಗ ನೀ ಒಂದಾಗೋ ||೧||

ಸತ್ಯವ ನುಡಿದು
ನೀತೀಲಿ ನಡಿಯುತ
ತಿಳಿಯಾಗು ತಿಳಿಯಾಗು ತಿಳಿಯಾಗೋ ||೨||

ತಿಳಿದೆನಂದರ ಅದು ತಿಳಿಲಿಲ್ಲ
ಅಳಿದೆನಂದರ ಅದು ಅಳಿಲಿಲ್ಲ
ಕಲ್ಮಠದ ಗುರುವಿನ ಅರಿತರ ಸಾಕು
ಎಲ್ಲವೂ ತಿಳಿತಾದಯಪ್ಪಾ ||೩||

೮೩. ದೈವ

ಎಷ್ಟು ಓಡುತಿ ನೀ ಓಡಪ್ಪ
ಓಡಿ ಓಡಿ ನೀ ದಣದೆಪ್ಪ ||ಪ||

ಕಾಲ ಸಡಿಲ ಬಿಟ್ಟೀ
ಊಟಬೈಸಾಕಿ ಹೊಡದಿ
ಕಾಲಾಗ ಶಕ್ತಿ ಬಲ ಬಂತು ಅಂದಿ
ಓಟಾದ ಕಣದಾಗ ನೀ ಬಂದು ನಿಂದಿ ||೧||

ಚಿಗರಿ ಓಡಿದಾಂಗ ನೀ ಓಡಿದಿ
ಚಿಗರಿಯಂಗ ನೀ ಚಂಗನ ಜಿಗದಿ
ಎಲ್ಲರಿಗೂ ಹಿಂದ ನಾ ಹಾಕೇನಂದಿ
ನನ್ನ ಮುಂದ ಇನ್ನಾರು ಇಲ್ಲಿ ಇಲ್ಲಂದಿ ||೨||

ನೀ ಥಾಜ್ಯಾ ಮುಟ್ಟಬೇಕಂತ ಹ್ವಾದೀ
ದೈವ ನಿನಗಿಂತ ಮೊದಲ ಅಲ್ಲಿರುದು ಕಂಡೀ
ಅದಕ ನೋಡಿ ನೀ ಹೌಹಾರಿ ಹ್ವಾದೀ
ಕಲ್ಮಠದ ಗುರು ಅದಕ ಕಳಸ್ಯಾನ ಮುದದಿ ||೪||

೮೫. ಮಾಡಿದ್ದುಣ್ಣು

ಮಾಡಿದ್ದು ಉಂಡನು ಮಾರಾಯ
ಬಿತ್ತಿದ್ದು ಬೆಳೆದನು ಶಿವರಾಯ ||೧||

ರೊಟ್ಟಿ ಮಾಡಿ ನಾವು
ಹೋಳಿಗಿ ಬೇಡಿದರ
ಸಿಕ್ಕಿತೇನೋ ಮಾರಾಯ? ||೨||

ನೀರ ಕುಡಿದು ನಾವು
ತುಪ್ಪದ ರುಚಿ ಬೇಡಿದರ
ದಕ್ಕಿತೇನೋ ಮಾರಾಯ? ||೩||

ಜ್ವಾಳಾ ಬಿತ್ತಿ ನಾವು
ಗೋದಿ ಬೆಳಿ ಅಂದsರ
ಬೆಳೆದಿತೇನೋ ಶಿವರಾಯ? ||೪||

ಬೇವು ಬಿತ್ತಿ ನಾವು
ಮಾವು ಬೆಳಿ ಅಂದರ
ಸಾಧ್ಯವೇನೋ ಶಿವರಾಯ? ||೫||

ಕಲ್ಮಠದ ಗುರುವಿಗಿ ಗುರುವೆ ಅನಬೇಕು
ನರನವನಂದರ ಹೇಗೋ?
ಇದರ ನೆಲಿ ತಿಳಿ ನೀ ಬ್ಯಾಗೋ ||೬||

೮೬. ಆಶೆ

ಬಿಡು ಜೀವ ಆಶೀ
ತೊಡು ನೀ ನಿರಾಶೀ ||೧||

ಆಶೀಯ ತಾಯೀಗೆ
ಅಸಂಖ್ಯಾತ ಮಕ್ಕsಳು
ಕೇಕೇ ಹಾಕಿ ಕೂಗತಾವ
ಕೂಗುತ ಕುಣಿದು ಚೀರತಾವ ||೨||

ಗದ್ದಲದ ಸಂತ್ಯಾಗ
ನಿನಗೆಲ್ಲಿೀದು ಏಕಾಂತ
ಆಶೀಯ ಗದ್ದಲ ಭಾಳ
ತಿಳಿಬೇಕs ಅದರ ಆಳ ||೨||

ಒಂದ ಮುಗಿತಂದsರ
ಮತ್ತೊಂದು ಅದರ ಹಿಂದ
ಒಂದರ ಹಿಂದೊಂದು
ಮತ್ತೊಂದು ಮಗುದೊಂದು ||೩||

ಬಿಡು ತಮ್ಮಾ ಮನದ ಆಶೀ
ಕಲ್ಮಠದ ಗುರುವಿನಲಿ ಹೊಂದು ಸಂತೋಷಿ
ಆಶೀ ಬಿಟ್ಟರ ಈಶ ನೀನು
ಆಶೀ ಹಿಡಕೊಂಡಿ ದಾಸ ನೀನು ||೪||

## ೮೬. ದೀಪ

ಗಾಳೀಯು ಬಿಟ್ಟಾಗ
ದೀಪ ಹೊಯ್ದಾಡುತಾದ ||ಪ||

ಹಚ್ಚಿಟ್ಟ ದೀಪsಕ ನಿನ ಕೈಯ ಕಾಪ್ಯಾಕ
ಮುಚ್ಚೀದ ಬಾಗಿಲ ಮತ್ತ್ಯಾಕ ತೆರದ್ಯಾಕ
ಗಾಳೀಯು ಒಳನುಗ್ಗಿ ದೀಪ ಹೊಯ್ದಾಡೀತು ||೧||

ಎಣ್ಣೆ ಇರುವ ತನಕ ದೀಪಂತ ನೀ ಕುಂತಿ
ಎಣ್ಣೆಯು ತುಂಬಿ ತುಳಕಿದರೇನು?
ಗಾಳಿಯು ಬಿಟ್ಟಾದ ದೀಪ ಹೊಯ್ದಾಡತಾದ ||೨||

ದೀಪ ಹಚ್ಚಿದವನು ನಾನಲ್ಲ-ನೀನಲ್ಲ
ಯಾರು ಹೊತ್ತಿಸಿದರೇನೊ ಆ ಶಿವನೆ ಬಲ್ಲ
ಕಲ್ಮಠದ ಗುರುವೀಗೆ ಕೇಳು ತಿಳದಿತ್ತೆಲ್ಲ
ಸುಮ್ಮನ ಕುಂತರ ದೀಪ ಇನ್ನಿಲ್ಲ ||೩||

## ೮೭. ಯಾರಿಗೆ ಯಾರು?

ಯಾರಿಗೀ ಯಾರು ಅಂತೀ
ನೀ ಯಾರಿಗಾಗದೆ ಕುಂತಿ ||ಪ||

ಉಪಕಾರ ಬೇಕಂತಿ
ಅಪಕಾರ ಮಾಡುತಿ
ಯಾರಿಗಿ ಯಾರು ಅಂತೀ
ನೀ ಯಾರಿಗಾಗದೆ ಕುಂತಿ ||೧||

ಸಹಕಾರ ಬೇಕಂತಿ
ವಿಕಾರ ಮಾಡುತಿ
ಯಾರಿಗಿ ಯಾರು ಅಂತೀ
ನೀ ಯಾರಿಗಾಗದೆ ಕುಂತಿ ||೨||

ಲಾಭವು ಬೇಕಂತಿ
ಹಾನಿ ನೀ ಮಾಡುತಿ
ಕಲ್ಮಠದ ಗುರು ಯಾರು ಅಂತಿ
ನೀ ಯಾರಿಗಾಗದೆ ಕುಂತಿ ||೩||

## ೮೮. ಬೆಲ್ಲದ ವ್ಯಾಪಾರ

ಬೆಲ್ಲದ ವ್ಯಾಪಾರ ಎನಗಾಯ್ತು
ಬಲ್ಲಿದರಿಗಿದು ಭಲೆ ತಿಳಿದ್ಹೋಯ್ತು ||ಪ||

ಸೋಳಾ ಮಣದ ಶೆಟ್ಟಿ
ಚೌದಾ ಮಣವ ನೀ ಕೊಟ್ಟಿ
ಬದಿಯ ಜನರಿಗದು ತಿಳಿಲಿಲ್ಲ ಗಟ್ಟಿ
ಮುದದಿ ಕೊಟ್ಟಿ ಸರಿ ತೂಕ ಶಿವಶೆಟ್ಟಿ ||ಪ||

ಕಣ್ಣಲ್ಲಿ ಬೆಳಕು ಕಂಡಿತ್ತು
ಕುಣಿಯುತ ಮನಸು ನುಡಿದಿತ್ತು
ಅಣಿಯಾಗು ಅಣಿಯಾಗು ಅಂದಿತ್ತು
ಮಣಿಹಕ್ಕಿ ನನ್ನನ್ನು ಒಲಿಸಿತ್ತು ||೨||

ಮೂರು ಗುಣಗಳ ಮುರಿದಾಯ್ತು
ಆರು ಗುಣಗಳರಿ ಜರಿದಾಯ್ತು
ಹಿರಿದಾದ ಲಾಭವು ಎನಗಾಯ್ತು
ಕಲ್ಮಠದ ಗುರುವಿಗಿ ತಿಳಿದ್ಹೋಯ್ತು ||೩||

## ೭೯. ಸರ್ವಮಂಗಳವು

ಮಂಗಳವು ಸರ್ವಮಂಗಳವು ||ಪ||

ಮಂಗಳವು ಗುರುವೀಗೆ
ಮಂಗಳವು ಲಿಂಗನಿಗೆ
ಮಂಗಳವು ಜಂಗಮಗೆ
ಮಂಗಳವು ಸರ್ವಮಂಗಳವು ||೧||

ಮಂಗಳವು ಶಿವನಿಗೆ
ಮಂಗಳವು ಶರಣರಿಗೆ
ಮಂಗಳವು ಕಲ್ಮಠದ ಗುರುದೇವಗೆ
ಮಂಗಳವು ಸರ್ವಮಂಗಳವು ||೨||

◆ ◆ ◆

ಸುತ್ತೂರು ಶ್ರೀ ಜಗದ್ಗುರು ವೀರಸಿಂಹಾಸನ ಮಹಾಸಂಸ್ಥಾನಮಠ, ನಾಡಿನ ಒಂದು ಪ್ರಾಚೀನ ಧರ್ಮಪೀಠ. ಚೋಳಚಕ್ರೇಶ್ವರನ ಪ್ರಾರ್ಥನೆಯ ಸುಮಧುರ ರಸಾಮೃತ ಫಲ. ಸಂಸ್ಥಾಪನಾಚಾರ್ಯರು ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು. ಆ ಮಹಾ ಶಿವಯೋಗಿಗಳು ನಿತ್ಯನಿಜಾನಂದದಲ್ಲಿ ಸದಾ ನೆಲೆಸಿರುವ ಶಿವಯೋಗಸಮಾಧಿ—ಅದುವೆ ಶ್ರೀಕರ್ತೃಗದ್ದುಗೆ. ಅದು ನಿಶ್ಚಿಂತ ನಿಜನಿವಾಸ, ಬೆಳಕಿನ ಪ್ರಭಾತ ಆವಾಸ. ಅಲ್ಲಿಂದ ಹೊರಹೊಮ್ಮುವ ಶಿವಬೆಳಗು ಸರ್ವವ್ಯಾಪಿಯಾಗಿ ಹರಿದು ನಡೆದು ಬರುತ್ತಿದೆ ಮನುಕುಲದ ಕಲ್ಯಾಣ ಅಸದೃಶವಾಗಿ. ಉಜ್ವಲವಾದ ಆ ಗುರುಪರಂಪರೆಯ ಒಂದ ಮಹಾನುಭಾವರೆಲ್ಲರೂ ಕಾರುಣ್ಯಸಿಂಧುಗಳು, ಲೋಕೈಕಬಂಧುಗಳು.

ನಾಡಿನ ಧಾರ್ಮಿಕ–ಸಾಮಾಜಿಕ, ಶೈಕ್ಷಣಿಕ–ಸಾಂಸ್ಕೃತಿಕ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಶ್ರೀಮಠದ ಸೇವೆ ಅಮೋಘ ಹಾಗೂ ಅದ್ವಿತೀಯ. ಸಾಹಿತ್ಯ–ಸಂಗೀತ–ಕಲೆಗಳಿಗೆ ನೀಡುತ್ತಿರುವ ಕೊಡುಗೆ ಅಸಂಖ್ಯ ಹಾಗೂ ಗಣನೀಯ. 'ಪರಮಶಿವಾಧಿಕ್ಯ ಚೂಡಾಮಣಿ' ಗ್ರಂಥವನ್ನು ರಚಿಸಿ ಶ್ರೀ ಮಲೆಯಮಾದೇಶ್ವರರಿಗೆ ಆಶ್ರಯ ನೀಡಿದ ಸಿದ್ಧನಂಜದೇಶಿಕೇಂದ್ರರು; 'ಅಮುಗಿದೇವಯ್ಯಗಳ ಸಾಂಗತ್ಯ'ವನ್ನು ಬರೆದ ಕವಿ ಶಿವಲಿಂಗ ದೇವನಿಗೆ ಪ್ರೇರಕ—ಪೋಷಕರಾದ ಕಪಿನೀನಂಜುಂಡದೇಶಿಕೇಂದ್ರರು; ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪ್ರಮುಖರಲ್ಲಿ ಒಬ್ಬರಾಗಿ ಸ್ವತಂತ್ರವಚನಕಾರರೆಂದು ಪ್ರಸಿದ್ಧರಾದ ಘನಲಿಂಗಿಶಿವಯೋಗಿಗಳು; 'ಮಂತ್ರಮಹರ್ಷಿ'ಗಳೆನಿಸಿ 'ಶಿವಮಂತ್ರಮಹಿಮೆ' ಗ್ರಂಥವನ್ನು ನೀಡಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು; 'ಘನಲಿಂಗಿ ದೇವರ ವಚನಗಳು' ಮತ್ತು ಶ್ರೀ ಗೌರೀಶಂಕರ ಮಹಾಸ್ವಾಮಿಗಳವರ 'ಅಕ್ಕಮಹಾದೇವಿ' ಚಂಪೂಕಾವ್ಯ—ಇವುಗಳನ್ನು ಸಂಪಾದಿಸಿಕೊಟ್ಟ 'ಶ್ರೀಮನ್ಮಹಾರಾಜ ರಾಜಗುರುತಿಲಕ' ಜಗದ್ಗುರು ಡಾ. ಶ್ರೀಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು; 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ'ವನ್ನು ಸಂಪಾದಿಸಿಕೊಟ್ಟು ಗ್ರಂಥ ಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಿರುವ ಪೂಜ್ಯಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರಮಹಾಸ್ವಾಮಿಗಳು—ಇವರೇ ಮೊದಲಾದ ಗುರುವರೇಣ್ಯರು ಕೈಕೊಂಡ ಧರ್ಮಸಂರಕ್ಷಣೆ—ಸಾಹಿತ್ಯಪರಿಪೋಷಣೆ ಗಮನಾರ್ಹ ಹಾಗೂ ಸ್ಮರಣಾರ್ಹ. ಮನುಕುಲದ ಏಳಿಗೆಗಾಗಿ ಶ್ರೀಪೀಠದಿಂದ ಸಲ್ಲುತ್ತಿರುವ ಮಹತ್ಸೇವೆ ಅಭಿವಂದನೀಯ ಹಾಗೂ ಸದಾ ಸಂಸ್ಮರಣೀಯ !

---

**ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ : ಮೈಸೂರು**